# ಮಾನಸ

ಸಂಪುಟ : ೨ ಸಂಚಿಕೆ : ೫
ಜೂನ್ ೧೯೮೯





ವಿಳಾಸ **"ಮಾನಸ ತಿಂಗಳ ಪತ್ರಿಕೆ"**
ಪಂಚಾಯಿತಿ ರಸ್ತೆ
ಕಾಡುಗೋಡಿ (ಪೊ.)
ಬೆಂಗಳೂರು—**560-067.**



**ಸೂಚನೆ:** ವಾರ್ಷಿಕ ಚಂದಾ :**15**ರೂ.
ಆಜೀವ ಚಂದಾ :**250**ರೂ.
ಒಂದು ವಿಶೇಷ ಸಂಚಿಕೆಯೊಂದಿಗೆ
ಒಟ್ಟು ಹನ್ನೊಂದು ಸಂಚಿಕೆಗಳು.
ಹಣವನ್ನು ಬ್ಯಾಂಕ್ ಡ್ರಾಫ್ಟ್, ಎಂ. ಓ.
ಮೂಲಕ ಸ್ವೀಕರಿಸಲಾಗುವುದು.


**ಈ ಸಂಚಿಕೆಯಲ್ಲಿ...........**



ಮುಖಪುಟ: ಆರ್. ಎಂ. ಹಡಪದ್.



## ಸಂಪಾದಕೀಯ

ಶತಮಾನಗಳಿಂದ ಸ್ತ್ರೀಯರ ಮೇಲೆ ನಡೆಯುತ್ತಿರುವ ಶೋಷಣೆಯನ್ನು ಅದರ ವಿವಿಧ ಆಯಾಮಗಳನ್ನು ಸಮಾಜದ ಬೆಳಕಿಗೆ ತಂದಿರುವುದು, ಹಾಗೂ ತರುತ್ತಿರುವುದು ಮಹಿಳಾ ಸಂಘಟನೆಗಳು, ಸಮಸ್ಯೆಗಳ ಐತಿಹಾಸಿಕ ಹಾಗೂ ವೈಜ್ಞಾನಿಕ ವಿಶ್ಲೇಷಣೆಗೆ ಅಡಿಗಲ್ಲು ಹಾಕಿರುವುದು ಮಹಿಳಾ ಚಳುವಳಿ.

ಈ ಚಳುವಳಿಯ ಪ್ರಯತ್ನದ ಫಲವಾಗಿ ಇಂದು ವಿಶ್ವವಿದ್ಯಾನಿಲಯದ ಹಂತದಲ್ಲಿ ಮಹಿಳಾ ಅಧ್ಯಯನದ ವಿಚಾರಗಳು ಸಾಕಷ್ಟು ಕೇಳಿ ಬರುತ್ತಿವೆ. ಚಳುವಳಿಯ ಫಲಗಳನ್ನು ಗುಣಾತ್ಮಕವಾಗಿಯೇ ಬಳಸಿಕೊಳ್ಳುವ ವ್ಯಕ್ತಿಗಳು ಹಾಗೂ ಸಂಸ್ಥೆಗಳು ಚಳುವಳಿಗಳನ್ನು ಅಥವಾ ಸಂಘಟನೆಗಳನ್ನು ತಳ್ಳಿಹಾಕುವುದು ಒಂದು ದುರಂತವೆ ಸರಿ. ಮಹಿಳಾ ಅಧ್ಯಯನವನ್ನು ಪದವಿ ಮಟ್ಟದಲ್ಲಿ ಪ್ರಾರಂಭಿಸಲಾದ ಎ೯. ಎಂ. ಕೆ. ಆರ್.ವಿ. ಕಾಲೇಜಿನ ಶ್ರೀಮತಿ ಚಿ. ನ. ಮಂಗಳ ಹಾಗೂ ಮೈಸೂರು ವಿಶ್ವವಿದ್ಯಾಲಯದ ಉಪಕುಲಪತಿಯವರ ಮಾತುಗಳು ಇದಕ್ಕೆ ಉತ್ತಮ ನಿದರ್ಶನ.

ತಾವು ಫೆಮಿನಿಸ್ಟ್ ಅಲ್ಲ, ಮಹಿಳಾ ಅಧ್ಯಯನ ಮಹಿಳಾ ಚಳುವಳಿಯ ಒಂದು ಭಾಗವಲ್ಲ ಎಂದು ಹೇಳುವುದರ ಮೂಲಕ "ಫೆಮಿನಿಸಂ" ಗೆ ಒಂದು ನಕಾರಾತ್ಮಕ ಲೇಬಲ್ ಅಂಟಿಸಿದ್ದಾರೆ. ಇಂತಹ ನಿದರ್ಶನಗಳು ಹಿಂದಿನಿಂದಲೂ ಕಂಡುಬರುತ್ತಿವೆಯಾದರೂ, ಜವಾಬ್ದಾರಿಯುತ ಸ್ಥಾನದಲ್ಲಿರುವ ವ್ಯಕ್ತಿಗಳು ಕೆಲವು ನಿರ್ಧಿಷ್ಟ ಹೇಳಿಕೆಗಳನ್ನು ನೀಡುವಾಗ ಸ್ಪಷ್ಟೀಕರಣ ನೀಡುವುದು ಅತ್ಯಗತ್ಯವಾಗಿದೆ. "ಫೆಮಿನಿಸಂ" ನ ಅವರ ತಪ್ಪು ಗ್ರಹಿಕೆಯ ವಿವರಣೆಯ ಜವಾಬ್ದಾರಿಯು ಅವರ ಮೇಲಿದೆ.

ಭಾರತದಲ್ಲಿ ಐತಿಹಾಸಿಕವಾಗಿ ಮಹಿಳಾ ಚಳುವಳಿ ಹಾಗೂ ಮಹಿಳಾ ಸಂಘಟನೆಗಳು ಎತ್ತಿದ ಪ್ರಶ್ನೆಯಿಂದಾಗಿ ಮೂಡಿಬಂದ ಮಹಿಳಾ ಅಧ್ಯಯನ ಯಾವ ರೀತಿಯಲ್ಲಿ ಮಹಿಳಾ ಚಳುವಳಿಯ ಭಾಗವಲ್ಲ, ಹಾಗೂ ಯಾವ ದೃಷ್ಟಿಯಲ್ಲಿ ಫೆಮಿನಿಸಂ ಅಂಶಗಳನ್ನೊಳಗೊಂಡಿಲ್ಲವೆಂಬ ವಿವರಣೆಯನ್ನು ಗುರುತರ ಜವಾಬ್ದಾರಿಗಳನ್ನು ವಹಿಸಿಕೊಂಡಿರುವ ಇವರು ವಿವರಿಸುವ ಅಗತ್ಯವಿದೆ. ಫೆಮಿನಿಸಂ ಹಾಗೂ ಮಹಿಳಾ ಚಳುವಳಿಗಳಲ್ಲಿ ವಿವಿಧ ದೃಷ್ಟಿಕೋನಗಳಿವೆ ಎಂಬುದನ್ನು ಇವರು ಗಮನಿಸಬೇಕು.

# ಮಹಿಳಾ ಅಧ್ಯಯನ

**ದಕ್ಷಿಣ ಕನ್ನಡದ ಅನಂತಶಾಸ್ತ್ರಿಗಳ ಮಗಳು ರಮಾಬಾಯಿ ಆಯೋಗವೊಂದರ ಮುಂದೆ ನಿಂತು ಮೂಕ ಸ್ತ್ರೀ ಸಮುದಾಯಕ್ಕೆ ದನಿಯಾದಾಗಿನಿಂದ ಮಹಿಳೆ ಹಲವು ಮಜಲುಗಳನ್ನು ಕಂಡಿದ್ದಾಳೆ. ಮಹಿಳಾ ಅಧ್ಯಯನ ಇಂದು ಅಗತ್ಯವೆನಿಸಿ ವಿಶ್ವವಿದ್ಯಾಲಯಗಳೂ ಈ ಅಧ್ಯಯನಕ್ಕೆ ಹಣ ಮೀಸಲಿಡತೊಡಗಿವೆ.**

"ಭಾರತದ ನೂರು ಜನ ಪುರುಷರಲ್ಲಿ ೯೯ ರಷ್ಟು ಜನ ಮಹಿಳೆಯರಿಗೆ ವಿದ್ಯಾಭ್ಯಾಸ ಕೊಡಿಸುವುದನ್ನು ತೀವ್ರವಾಗಿ ವಿರೋಧಿಸುತ್ತಾರೆ. ದೇಶದ ಜನಸಂಖ್ಯೆಯಲ್ಲಿ ಅರ್ಧದಷ್ಟಿರುವ ಮಹಿಳೆಯರು ಇನ್ನುಳಿದ ಪುರುಷರಿಂದ ಕ್ರೂರವಾಗಿ ಶೋಷಿತರಾಗುತ್ತಿದ್ದಾರೆ. ಮಹಿಳಾ ಶಿಕ್ಷಕಿಯರು, ಮಹಿಳಾ ಇನ್ಸ್‌ಪೆಕ್ಟರುಗಳು ನೇಮಿಸಲ್ಪಡಬೇಕಲ್ಲದೆ, ಮಹಿಳೆಯರು ವೈದ್ಯಕೀಯವನ್ನು ಅಭ್ಯಾಸ ಮಾಡಲು ಅವಕಾಶವನ್ನು ಮಾಡಿಕೊಡಬೇಕು. ಪುರುಷರು ಮಹಿಳೆಯರನ್ನು ತಮ್ಮ ಆಸ್ತಿಯೆಂದು ತಿಳಿದಿದ್ದಾರೆ. ನಾವು ಪರಿಸ್ಥಿತಿಯ ವಿಮೋಚನೆ ಹೊಂದಲು ಪ್ರಯತ್ನಿಸುತ್ತಿದ್ದೇವೆ. ಆದರೆ ಕೆಲವರು ಇಂತಹ ಪ್ರಯತ್ನವನ್ನು ಪುರುಷ ವಿರೋಧಿ ನಡವಳಿಕೆ ಹಾಗೂ ಪಾಪಕೃತ್ಯವೆಂದು ಹೇಳುತ್ತಾರೆ."

೧೮೮೨ರಲ್ಲಿ ಭಾರತೀಯ ವಿದ್ಯಾಭ್ಯಾಸ ಪದ್ಧತಿಯನ್ನು ಅಭ್ಯಸಿಸಲು ಸರ್ಕಾರ ನೇಮಿಸಿದ ಆಯೋಗದ ಮುಂದೆ ಸ್ತ್ರೀಯರ ಮೂಕ ಸಮುದಾಯಕ್ಕೆ ದನಿ ನೀಡಿ ಕಳಕಳಿಯ ಮನವಿಯೊಂದನ್ನು ಕರ್ನಾಟಕದ ಮಹಿಳೆಯೊಬ್ಬಳು ಅರ್ಪಿಸಿದಳು. ದಕ್ಷಿಣ ಕನ್ನಡ ಜಿಲ್ಲೆಯ ಮಾಳ ಎಂಬ ಗ್ರಾಮದಲ್ಲಿ ವಾಸವಾಗಿದ್ದ ಅನಂತ ಶಾಸ್ತ್ರಿಗಳ ಮಗಳು ರಮಾಬಾಯಿ.

ಶತಮಾನಗಳಿಂದ ಕತ್ತಲೆಯ ಕೂಪದಲ್ಲಿ ಕೊಳೆಯುತ್ತಿರುವ ಸ್ತ್ರೀಯರ ಹೃದಯಗಳಿಗೆ ಜ್ಞಾನಾರ್ಜನೆಯು ಹೊಸ ಬೆಳಕಿನ ಕೈದೀವಿಗೆಯಾಗಬಹುದೆಂದು ಶಾಸ್ತ್ರಿಗಳು ಬಲವಾಗಿ ನಂಬಿದ್ದರು. ಜ್ಞಾನ ದಾಹಿಗಳಾದ ತಮ್ಮ ಹೆಂಡತಿ ಹಾಗೂ ಮಗಳಿಗೆ ತಮ್ಮ ಪಾಂಡಿತ್ಯವನ್ನು ಧಾರೆಯೆರೆದರು. ಆದರೆ ಜಿಡ್ಡುಗಟ್ಟುವ ಸಾಂಪ್ರದಾಯದ ಮೂಲಗಳಿಂದ ಕಮಟಿ ಹೋದ ಹಿಂದೂ ಸಮಾಜ ಹೆಣ್ಣುಮಕ್ಕಳಿಗೆ ವಿದ್ಯಾಭ್ಯಾಸ ಕಲಿಸುತ್ತಿದ್ದ ಶಾಸ್ತ್ರಿಗಳಿಗೆ ಬಹಿಷ್ಕಾರ ಹಾಕಿತು. ಬಹಿಷ್ಕಾರ ಮೂಲಗಳನ್ನು ಮೀರಿಬೆಳೆದು "ಪಂಡಿತಾ" ಎನಿಸಿಕೊಂಡ ರಮಾಬಾಯಿ ೧೯ನೇ ಶತಮಾನದ ಸ್ತ್ರೀಯರ ಜಾಗೃತಿಗೆ ಕಾರಣಳಾದಳು.

ಕ್ರಮೇಣ ಸ್ತ್ರೀಯರನ್ನು ಅವರ ಕರ್ತವ್ಯಗಳನ್ನು ಜವಾಬ್ದಾರಿಗಳನ್ನು ನೋಡುವ ದೃಷ್ಟಿಕೋನದಲ್ಲಿ ಹಲವಾರು ಬದಲಾವಣೆಗಳುಂಟಾದವು ಸ್ವಾತಂತ್ರ್ಯ ಹೋರಾಟದ ಪ್ರಭಾವ. ಇಂಗ್ಲಿಷ್ ವಿದಾಭ್ಯಾಸ, ಸಮಾಜ ಸುಧಾರಕರ, ಉದಾರವಾದಿ ನಾಯಕ ನಾಯಕಿಯರ ಪ್ರಭಾವದಿಂದಾಗಿ ಮಹಿಳೆಯರಿಗೆ ವಿದ್ಯಾಭ್ಯಾಸದ ಅಗತ್ಯವನ್ನು ಮನಗಾಣಲಾಯಿತು. ರಾಜಾರಾಂ ಮೋಹನ್‌ರಾಯ್, ಗಾಂಧೀಜಿ, ಕಮಲಾದೇವಿ ಚಟ್ಟೋಪಾಧ್ಯಾಯ, ಮುತ್ತುಲಕ್ಷ್ಮಿರೆಡ್ಡಿ, ಅನಿಬೆಸೆಂಟ್ ಮುಂತಾದ ಪ್ರಮುಖರು ಸ್ತ್ರೀಯರ ಕಲ್ಯಾಣಕ್ಕೆ ಶ್ರಮಿಸಿದರು. ಈ ಹಿನ್ನೆಲೆಯಲ್ಲಿಯೇ ಬಾಂಬೆ, ಪೂನಾ, ಮದ್ರಾಸ್ ಮುಂತಾದ ಕಡೆಗಳಲ್ಲಿ ಮಹಿಳೆಯರಿಗಾಗಿಯೇ ಕಾಲೇಜುಗಳನ್ನು ತೆರೆಯಲಾಯಿತಲ್ಲದೆ, ಹೆಣ್ಣುಮಕ್ಕಳ ವಿದ್ಯಾಭ್ಯಾಸಕ್ಕೆ ಪ್ರೋತ್ಸಾಹ ನೀಡಲಾಯಿತು.

ಮಕ್ಕಳ ವಿದ್ಯಾಭ್ಯಾಸಕ್ಕೆ ನೀಡಲಾಗುತ್ತಿದ್ದ ಪ್ರೋತ್ಸಾಹಕ್ಕೆ ಪೋಷಕವಾದ ಅಂಶಗಳು ನಮ್ಮ ಸಮಾಜದಲ್ಲಿ ಪ್ರಚಲಿತದಲ್ಲಿರುವ ಪರಂಪರೆಯ ಚೌಕಟ್ಟಿನಲ್ಲೇ ಇದ್ದವು. "ಮನೆಯೇ ಮೊದಲ ಪಾಠಶಾಲೆ,

ಜನನಿ ತಾನೆ ಮೊದಲ ಗುರು," ಉತ್ತಮ ತಾಯಂದಿರನ್ನು ಸೃಷ್ಟಿಸಲು, ಉತ್ತಮ ನಾಗರೀಕರನ್ನು ಬೆಳೆಸುವ ಆಧುನಿಕ ಬೇಡಿಕೆಗಳಿಗನ್ವಯ ಯಶಸ್ವಿಯಾಗಿ ಕುಟುಂಬವನ್ನು ನಿರ್ವಹಿಸಿಕೊಂಡು ಹೋಗುವ ಮಹಿಳೆಯರನ್ನು ತಯಾರಿಸುವುದು, ವಿದ್ಯಾಭ್ಯಾಸದ ಪ್ರಮುಖ ಗುರಿಯಾಗಿತ್ತು.

ಕುಟುಂಬದ ಅಗತ್ಯದಿಂದ, ಹಾಗೂ ರಚನೆಯ ವ್ಯಾಖ್ಯಾನದಿಂದ ಮೂಡಿಬಂದ ಈ ಹೊಸ ಮೂಲಗಳು ಕ್ರಮೇಣ ಶಿಕ್ಷಣ ಸಂಸ್ಥೆಗಳ ಮೇಲೂ ಪ್ರಭಾವ ಬೀರಿದವು. ಗೃಹವಿಜ್ಞಾನ, ಉಪಾಧ್ಯಾಯ ವೃತ್ತಿ, ದಾದಿವೃತ್ತಿ ಮುಂತಾದ ಸೇವಾಮನೋಭಾವದ ಶಿಕ್ಷಣಗಳು ಸ್ತ್ರೀಯರಿಗೆ ಅವರು ಕುಟುಂಬವನ್ನು ನಿರ್ವಹಿಸಬೇಕಾದ ಜವಾಬ್ದಾರಿಗಳಿಗೆ ತಕ್ಕುವಾದುದೆಂದು ಭಾವಿಲಾಗಿತ್ತು.

ಆದರೆ ೧೯೭೦ರ ಭಾರತದಲ್ಲಿನ ಮಹಿಳಾ ಚಳುವಳಿ ಹಾಗೂ ಇತರ ಬೆಳವಣಿಗೆಗಳು ಮಹಿಳಾ ಅಧ್ಯಯನದ ಬಗ್ಗೆ ಒಂದು ಹೊಸ ತಿರುವನ್ನೇ ಉಂಟುಮಾಡಿದವು. ಉಚ್ಚ ನ್ಯಾಯಾಲಯವು ಅತ್ಯಾಚಾರಕ್ಕೆ ಒಳಗಾದ ಮಥುರಾ ಎಂಬ ಮಹಿಳೆಯ ಬಗ್ಗೆ ನೀಡಿದ ತೀರ್ಪು ದೇಶದ ಬಹುಪಾಲು ಮಹಿಳೆಯರನ್ನು ಕೆರಳಿಸಿತು. ನೂರುವರ್ಷಗಳಿಗಿಂತ ಹಿಂದೆ ರಚಿತವಾದ, ಪೂರ್ವಾಗ್ರಹ ಪೀಡಿತ ಕಾನೂನಿನಲ್ಲಿ ಬದಲಾವಣೆಗಳನ್ನು ತರಬೇಕೆಂದು ದೇಶಾದ್ಯಂತ ಮಹಿಳೆಯರ ಒಕ್ಕೊರಲಿನ ದನಿ ಮಹಿಳಾ ಸಮಸ್ಯೆಗಳ ಹೊಸದೃಷ್ಟಿಕೋನಕ್ಕೆ ನಾಂದಿಯನ್ನು ಹಾಡಿತು.

ವರದಕ್ಷಿಣೆಗಾಗಿ ವಧುಗಳನ್ನು ಸುಡುವುದು, ಲೈಂಗಿಕ ಹಿಂಸೆ, ಅತ್ಯಾಚಾರ, ಅಸಮಾನ ವೇತನ, ಸ್ತ್ರೀ ಪುರುಷರ ನಡುವಿರುವ ತಾರತಮ್ಯ ಮೌಲ್ಯ ಮುಂತಾದವುಗಳನ್ನು ವಿರೋಧಿಸುವ ಮಹಿಳಾ ವೇದಿಕೆಗಳು, ಸಂಘಟನೆಗಳು ಪ್ರಾರಂಭವಾಗಿ, ವಿವಿಧ ಕಾರ್ಯಕ್ರಮಗಳನ್ನು ಹಮ್ಮಿಕೊಂಡವು. ಮನವಿ, ಕರಪತ್ರ, ಕಿರುಹೊತ್ತಿಗೆ, ಪುಸ್ತಕ, ಮಹಿಳಾ ಪತ್ರಿಕೆ, ಇತರ ಪತ್ರಿಕೆಗಳಲ್ಲಿ ಲೇಖನ ಪ್ರಕಟಣೆಯ ಮೂಲಕ ಮಹಿಳಾ ಸಮಸ್ಯೆಯ ವಿವಿಧ ಆಯಾಮಗಳಿಗೆ ಬೆಳಕು ಚೆಲ್ಲಲಾಯಿತು. ಇದುವರೆಗೆ "ವೈಯಕ್ತಿಕ", "ಕ್ಷುಲ್ಲಕ" ವೆಂದು ಕರೆಸಿಕೊಂಡ ಸಮಸ್ಯೆಗಳಿಗೆ ಒಂದು ರಾಜಕೀಯ, ಸಾಮಾಜಿಕ ಬಿಕ್ಕಟ್ಟು ದೊರೆಯಿತು.

ಒಂದು ದಶಕ ಕಾಲ ಮಹಿಳಾ ವೇದಿಕೆಗಳಲ್ಲಿ, ಸಂಘಟನೆಗಳಲ್ಲಿ ಕ್ರಿಯಾತ್ಮಕವಾಗಿ ಭಾಗವಹಿಸುತ್ತಿದ್ದ ಹಾಗೂ ಸಂಶೋಧನಾ ಪ್ರವೃತ್ತಿಯುಳ್ಳ ಮಹಿಳೆಯರಿಗೆ ಸಂಕೀರ್ಣವಾದ ಸ್ತ್ರೀಯರ ಸಮಸ್ಯೆಗಳ ಮೂಲ ಇತಿಹಾಸವನ್ನು ಹುಡುಕುವ ಕುತೂಹಲ ಸಹಜವಾಗಿ ಉಂಟಾಯಿತು, ಸಂಘಟನೆಗಳಲ್ಲಿ ಅಸ್ಪಷ್ಟತೆ, ಗೊಂದಲ, ವಿಶ್ಲೇಷಣೆಯ ಕೊರತೆಗಳು ಕಂಡುಬರತೊಡಗಿದವು. ಸ್ತ್ರೀ ಸಮಸ್ಯೆಯ ಮೂಲ, ತಾತ್ವಿಕ ನಿವುಲುಗಳು ಸಂಘಟನೆಗಳು ತುಳಿಯಬೇಕಾದ ಹಾದಿ, ತಳೆಯಬೇಕಾದ ನಿಲುವುಗಳು ತಿಳಿಯಾಗಿರಲಿಲ್ಲ. ಸಮಸ್ಯೆಗಳ ಮೂಲವನ್ನು ಸಹಜವಾಗಿ ಇತಿಹಾಸ, ಸಮಾಜಶಾಸ್ತ್ರ, ಜೀವಶಾಸ್ತ್ರಗಳಲ್ಲಿ ಅರಸತೊಡಗಿದರು.

ಆದರೆ ಇಂತಹ ಅಧ್ಯಯನ ಅವರು ಅರಸುತ್ತಿದ್ದ ಉತ್ತರವನ್ನು ನೀಡಲಿಲ್ಲ. ಬದಲಾಗಿ ಪ್ರತಿಯೊಂದು ಹಂತದಲ್ಲಿಯೂ ಪುರುಷ ಪ್ರಾಧಾನ್ಯ, ಪುರುಷರ ದೃಷ್ಟಿಕೋನ, ಸ್ತ್ರೀಯರ ಬಗೆಗೆ ಪೂರ್ವಾಗ್ರಹ ಪೀಡಿತ ಅಂಶಗಳು ಕಣ್ಣಿಗೆ ರಾಚುವಂತಿದ್ದವು.

ಇತಿಹಾಸದಲ್ಲಂತೂ ಮಹಿಳೆಯರ ಆಲೋಚನೆ, ಸಮಾಜಕ್ಕೆ ಅವರು ನೀಡಿದ ಕೊಡುಗೆ ಮುಂತಾದವು ದಾಖಲಾದುದೇ ಇಲ್ಲ. ಉತ್ತರಗಳನ್ನು ಅರಸುತ್ತಿದ್ದ ಅವರಿಗೆ ತಾವು ಹೊಸದನ್ನು ಸಂಶೋಧಿಸ ಬೇಕಾದ ಅಗತ್ಯ ತೀವ್ರವಾಗಿ ಕಂಡುಬಂದಿತು. ಭವಿಷ್ಯದ ಇತಿಹಾಸವನ್ನು ಸೃಷ್ಟಿಸುವಲ್ಲಿ ಪೂರಕವಾಗುವಂಥ ಸ್ತ್ರೀಯರ ಅನುಭವ, ಕೊಡುಗೆ ಮುಂತಾದವುಗಳನ್ನು ದಾಖಲಿಸುವುದು ಅನಿವಾರ್ಯ ಅಂಶವಾಯಿತು.

ಪುರುಷ ಪ್ರಧಾನವಾದ, ಇತಿಹಾಸದ ಪುನರ್ ವ್ಯಾಖ್ಯಾನ, ಸಮಾಜ ಶಾಸ್ತ್ರಜ್ಞರು, ಅರ್ಥಶಾಸ್ತ್ರಜ್ಞರು, ಸಮಾಜ ವಿಜ್ಞಾನಿಗಳ ತಾತ್ವಿಕ ನಿಲುವುಗಳನ್ನು ಪುನರ್ ವಿಮರ್ಶಿಸುವುದು, ಮಹಿಳೆಯರಿಗೆ ಸಂಬಂಧಪಟ್ಟ ದಾಖಲೆಗಳನ್ನು ಹುಡುಕಿ ತೆಗೆಯುವುದು, ಪುನರ್‌ವ್ಯಾಖ್ಯಾನಕ್ಕೆ ಸಂಬಂಧಪಟ್ಟ ನವೀನ ಮಾದರಿಯನ್ನು ಸಂಶೋಧಿಸುವುದು ಮಹಿಳೆಯರಿಗೆ ಅನಿವಾರ್ಯವಾಯಿತು.

ಜಾಗತಿಕ ಮಟ್ಟದಲ್ಲಿ ಸಮಾಜ ಬದಲಾವಣೆಯ ಹರಿಕಾರ ಕಾರ್ಲ್‌ಮಾರ್ಕ್ಸ್, ವಿಕಾಸವಾದಿ ಡಾರ್ವಿನ್, ಮಾನಸಿಕ ಶಾಸ್ತ್ರಜ್ಞ ಫ್ರಾಯ್ಡ್, ಸಮಾಜ ಶಾಸ್ತ್ರಜ್ಞ ಲೆಲಿಸ್ಟ್ರಾಸ್ ಮುಂತಾದವರ ವಿಶ್ಲೇಷಣೆಗಳು ಈ ಹಿನ್ನೆಲೆಯಲ್ಲಿ ತೀವ್ರವಾಗಿ ಟೀಕಿಸಲ್ಪಟ್ಟಿರುವುದನ್ನು ಗುರುತಿಸಬಹುದು.

ಇಂತಹ ವಿಷಯಗಳು ಸಂಶೋಧನೆಯ ಕ್ಷೇತ್ರದಲ್ಲಿ

---

ನೀರಾದೇಸಾಯಿಯವರ ಸತತ ಪ್ರಯತ್ನದಿಂದಾಗಿ ಎಸ್. ಎನ್. ಡಿ. ಟಿ. ಮಹಿಳಾ ಅಧ್ಯಯನ ಕೇಂದ್ರ ಬಾಂಬೆಯಲ್ಲಿ 1971 ರಲ್ಲಿ ಪ್ರಾರಂಭವಾಯಿತು. ಸಮಾಜ ಶಾಸ್ತ್ರದ ಒಂದು ಅಂಗವಾಗಿ ಪ್ರಾರಂಭವಾದ ಈ ಕೇಂದ್ರ ಇಂದು ಸ್ವತಂತ್ರ ಮಹಿಳಾ ಅಧ್ಯಯನ ಕೇಂದ್ರವಾಗಿ ಬೆಳೆದಿದೆ. ಮಹಿಳಾ ಸಮಸ್ಯೆಗಳ ಮೇಲೆ ಬೆಳಕು ಚೆಲ್ಲುವ ಉತ್ತಮ ಗ್ರಂಥಾಲಯ ಇಲ್ಲಿದೆ. ಆಗಾಗ್ಗೆ ಚರ್ಚೆ ವಿಚಾರ ಸಂಕಿರಣ ಮುಂತಾದವುಗಳನ್ನು ನಡೆಸುವುದರ ಜೊತೆಗೆ ಅಧ್ಯಾಪಕರಿಗೂ ಪೂರಕವಾಗುವ ತರಬೇತಿಯನ್ನು ಇಲ್ಲಿ ನೀಡಲಾಗುವುದು. ಹಿಂದುಳಿದ ದೇಶಗಳ ಮಹಿಳೆಯರ ಸ್ಥಿತಿಗಳ ಬಗ್ಗೆ ಮಾಹಿ ಸಂಗ್ರಹಿಸುವುದು, ಸಂಶೋಧನೆ ಮಾಡುವುದಕ್ಕೆ ಹೆಚ್ಚಿ ಒತ್ತು ನೀಡಲಾಗುತ್ತದೆ.

---

ದಿಗ್ಗಜಗಳೆನಿಸಿಕೊಂಡ ಪುರುಷರ ಸಿನಿಕ ಟೀಕೆಗಳಿಗೆ ಒಳಗಾದರೂ ಕ್ರಮೇಣ ಗಂಭೀರವಾದ ಮಹಿಳಾ ಅಧ್ಯಯನಕ್ಕೆ ಭದ್ರವಾದ ಬುನಾದಿಯನ್ನು ಹಾಕಿತು.

ಮಹಿಳಾ ಅಧ್ಯಯನದ ಸ್ವರೂಪ, ರೂಪುರೇಖೆ, ಪಠ್ಯಕ್ರಮ ಹೇಗಿರಬೇಕೆಂಬುದು ಒಂದು ಸಂಕೀರ್ಣವಾದ ಸಮಸ್ಯೆಯೇ ಸರಿ. ಮಹಿಳಾ ಅಧ್ಯಯನದ ಅಗತ್ಯವನ್ನು ಮಹಿಳೆಯರೆಲ್ಲರೂ ಒಕ್ಕೊರಲಿನಿಂದ ಒತ್ತಿ ಹೇಳುತ್ತಿರುವರಾದರೂ ಅಧ್ಯಯನದ ಸ್ವರೂಪದ ಬಗ್ಗೆ ತಳೆದಿರುವ ನಿಲುವುಗಳು ಭಿನ್ನವಾಗಿವೆ.

ತನ್ನನ್ನು ತಾನು ಅಧ್ಯಯನ ಮಾಡುವುದೇ ಮಹಿಳಾ ಅಧ್ಯಯನ. ವೈಯಕ್ತಿಕವಾದ ಮಹಿಳೆಯರ ಸಮಸ್ಯೆಗೆ ರಾಜಕೀಯ, ಸಾಮಾಜಿಕ ಆಯಾಮ ದೊರೆತಿದ್ದರೂ ವೈಯಕ್ತಿಕ ಹಂತದಲ್ಲಿ ಸ್ಪಂದಿಸಬೇಕಾದುದು ಅನಿವಾರ್ಯವಾಗುತ್ತದೆ. ಸ್ತ್ರೀಯರ ಬಗ್ಗೆ ಹೊಸ ಮೌಲ್ಯಗಳನ್ನು ಪ್ರತಿಬಿಂಬಿಸುವ ಅಧ್ಯಯನ ಪ್ರಸ್ತುತದಲ್ಲಿ ಕುಟುಂಬ ಸಮಾಜ ಮುಂತಾದವುಗಳ ಜೊತೆಗೆ ಗೊಂದಲ, ಘರ್ಷಣೆಗಳಿಗೆ ಪ್ರೇರಕವಾಗುತ್ತದೆ. ಈ ವಿಷಯವನ್ನು ಬೋಧಿಸುವ ಶಿಕ್ಷಕರಿಗೂ ಇದು ಅನ್ವಯಿಸುತ್ತದೆ.

ಮಹಿಳಾ ಅಧ್ಯಯನ ಒಂದು ದಶಕದಲ್ಲಿ ಮೂಡಿಬಂದ ಮಹಿಳಾ ಚಳುವಳಿಯ ಬಳುವಳಿ. ಹಾಗಾಗಿ ಮಹಿಳಾ ಅಧ್ಯಯನಕ್ಕೂ, ಮಹಿಳಾ ಚಳುವಳಿಗೂ ನೇರವಾದ ಸಂಬಂಧವಿದೆ. ಮಹಿಳಾ ಅಧ್ಯಯನದ ಸ್ವರೂಪವನ್ನು ನಿರ್ಧರಿಸುವಾಗ ಅದರ ಜೀವಸೆಲೆಯಾದ ಮಹಿಳಾ ಚಳುವಳಿಯನ್ನು ಅದು ಐತಿಹಾಸಿಕವಾಗಿ ಎತ್ತಿರುವ ಪ್ರಶ್ನೆಗಳ ಹಿನ್ನೆಲೆಯಲ್ಲಿ ರೂಪಿಸಬೇಕಾಗುತ್ತದೆ. ಸಂಘಟನೆ, ಹೋರಾಟ, ಚಳುವಳಿ ಮುಂತಾದವುಗಳ ನೇರ ಸಂಪರ್ಕ ಮಹಿಳಾ ಅಧ್ಯಯನಕ್ಕೆ ಅತ್ಯಗತ್ಯವಾದ ಅಂಶವಾಗಿದೆ.

ಸ್ತ್ರೀಯರ ದೈನಂದಿನ ನೋವು, ನಲಿವುಗಳಿಗೆ ಸ್ಪಂದಿಸದ ಅಧ್ಯಯನ ತುಳಿಯುವ ಹಾದಿ ಅನಾರೋಗ್ಯಕರವಾಗಿಬಿಡುತ್ತದೆ. ಕೇವಲ ಶೈಕ್ಷಣಿಕ ವಿಷಯವಾ ಪರಿಗಣಿಸಿ ಸಂಶೋಧನೆ ಪಿ. ಎಚ್. ಡಿ. ಮುಂತಾದವುಗಳು ಕೇವಲ ಶ್ರೀಮಂತ. ಮಹಿಳೆಯರ ಖ್ಯಾತಿ ತರುವ ಖಯಾಲಿಗಳಾಗಿಬಿಡುತ್ತವೆ. ಸ್ಪರ್ಧಾ ಮನೋಭಾವವಿಲ್ಲದ, ಶ್ರೇಣಿಕೃತ ವ್ಯವಸ್ಥೆಯಿಲ್ಲದ, ಹೊಸ ಸಮಾಜವನ್ನು ಹಂಬಲಿಸುವ ಮಹಿಳಾ ಅಧ್ಯಯನದ ಹಾದಿ ಅದರ ಸ್ವರೂಪವನ್ನು ಅವಲಂಬಿಸಿದೆ.

**ಎನ್. ಎಂ. ಕೆ. ಆರ್. ವಿ. ಕಾಲೇಜ್.**

ಭಾರತದಲ್ಲಿನ ಮಹಿಳಾ ಚಳವಳಿಯ ಭಾಗವಾಗಿ ಮಹಿಳಾ ಅಧ್ಯಯನಗಳು ಆರಂಭವಾದವು, ಮಹಿಳಾ ಸಂಶೋಧನಾ ಕೇಂದ್ರಗಳಲ್ಲದೆ, ವಿಶ್ವವಿದ್ಯಾನಿಲಯಗಳು, ಸಾಹಿತ್ಯ. ಇತಿಹಾಸ. ಸಮಾಜಶಾಸ್ತ್ರದ ಭಾಗವಾಗಿ ಮಹಿಳಾ ಅಧ್ಯಯನವನ್ನು ಅಳವಡಿಸಲಾಗುತ್ತಿದೆ, ಬೆಂಗಳೂರಿನಲ್ಲಿ ಇಂತಹ ಪ್ರಯತ್ನಗಳು ನಡೆಯುತ್ತಿರುವುದು ಸ್ವಾಗತಾರ್ಹ.

ಸಮನ್ವಿತಾದಲ್ಲಿ ಡಿಪ್ಲಮೋ ಮಾಡುತ್ತಿರುವ ೨೦ ಜನ ವಿದ್ಯಾರ್ಥಿನಿಯರಲ್ಲಿ ಹಲವರನ್ನು ಕಳೆದ ವರ್ಷ ಭೇಟಿ ಮಾಡಿದ್ದೆವು. ಅಲ್ಲಿದ್ದ ವಿದ್ಯಾರ್ಥಿನಿಯರಲ್ಲಿ ಸಾಕಷ್ಟು ಉತ್ಸುಕತೆ ಇತ್ತು. "ನಮ್ಮ ಬಗ್ಗೆ ತಿಳಿದುಕೊಳ್ಳಲು" ಸಹಾಯಕವಾಗಿದೆಯೆಂದು ಪ್ರತಿ

ಕ್ರಿಯೆ ವ್ಯಕ್ತಪಡಿಸಿದ ಇವರು ಮಹಿಳೆಯರ ಬಗ್ಗೆ ಗೊತ್ತಿಲ್ಲದ ಎಷ್ಟೋ ಸಂಗತಿಗಳನ್ನು ತಿಳಿದುಕೊಳ್ಳುತ್ತಿದ್ದೇವೆ ಎಂದಿದ್ದರು.

ಸ್ತ್ರೀಯರ ಹಕ್ಕುಗಳ ಬಗ್ಗೆ ಹೊಸ ಅರಿವ

---

ಮದುರೆಯ ಪರಾಶಕ್ತಿ ಮಹಿಳಾ ಕಾಲೇಜಿನಲ್ಲಿ ಮೂರು ವರ್ಷದ ಪದವಿ ತರಗತಿಯಲ್ಲಿ ಇತಿಹಾಸವನ್ನು ಐಚ್ಛಿಕ ವಿಷಯ ತೆಗೆದುಕೊಂಡಿರುವ ವಿದ್ಯಾರ್ಥಿನಿಯರು 'ಮಹಿಳಾ ಇತಿಹಾಸವನ್ನೊಂದು ವಿಷೇಶ ವಿಷಯವಾಗಿ ಓದಬೇಕಾಗುತ್ತದೆ. ಉತ್ತರ ಹಾಗೂ ದ. ಭಾರತದ ಪುರಾತನ ಮಹಿಳೆಯರು, ಮಧ್ಯಯುಗದ ಮುಸ್ಲಿಂ ಪ್ರಭಾವ ಹಾಗೂ ಮಹಿಳೆಯರು ಕ್ರಿ. ಶ. ೬00 ತಮಿಳು ಮಹಿಳೆಯರ ಸ್ಥಿತಿ - ಗತಿ. ಆಧುನಿಕ ಭಾರತದ ಮಹಿಳೆಯರ ಮೇಲೆ ವಿದೇಶಿ ಪ್ರಭಾವ ಮುಂತಾದ ವಿಷಯಗಳನ್ನು ಪಠ್ಯಕ್ರಮದಲ್ಲಿ ಅಳವಡಿಸಲಾಗಿದೆ. ವಿವಾಹ, ವಿಚ್ಛೇದನ, ಸತಿ ಪದ್ಧತಿ, ದೇವದಾಸಿಪದ್ಧತಿ, ಕಾನೂನು, ಸಾಹಿತ್ಯ, ಇವುಗಳನ್ನು ವಿದ್ಯಾರ್ಥಿನಿಯರು ಅಭ್ಯಸಿಸಬೇಕಾಗುತ್ತದೆ.

---

ನ್ನುಂಟು ಮಾಡುವ ಅಧ್ಯಯನ ಹಾಗೂ ಹೊರಗೆ ಬಂದೊಡನೆ ಸಮಾಜ ಹಾಗೂ ಕುಟುಂಬದಲ್ಲಿ ಸಾಂಪ್ರದಾಯಕ ಪಾತ್ರ ನಿರ್ವಹಿಸಬೇಕಾದ ಜವಾಬ್ದಾರಿ ನಿಮ್ಮಲ್ಲಿ ಗೊಂದಲ ಉಂಟು ಮಾಡುವುದಿಲ್ಲವೇ ಎಂದು ಪ್ರಶ್ನಿಸಿದಾಗ "ಖಂಡಿತಾ ಇಲ್ಲ ವಿಮೆನ್ಸ್ ಲಿಬ್‌ನಂತಹ ಸಂಗತಿಗಳನ್ನು ಇಲ್ಲಿ ಹೇಳಿ ಕೊಡುವುದಿಲ್ಲ" ಎನ್ನುವುದು ತಕ್ಷಣದ ಪ್ರತಿಕ್ರಿಯೆಯಾಗಿತ್ತು,

ಮಹಿಳೆ ಚಾರಿತ್ರಿಕವಾಗಿ ತಾನು ಬೆಳೆದು ಬಂದ ರೀತಿಯನ್ನು ಅಧ್ಯಯನ ಮಾಡಬೇಕು. ಹಾಗೂ ಜವಾಬ್ದಾರಿ ಮತ್ತು ಕರ್ತವ್ಯಗಳನ್ನು ಅರಿತುಕೊಳ್ಳುವ ಪರಿಪೂರ್ಣ ಮಹಿಳೆಯಾಗಬೇಕು ಎನ್ನುವುದು ಸಮಷ್ಟಿತಾದ ಗುರಿ ಮತ್ತು ಉದ್ದೇಶಗಳೆಂಬುದನ್ನು ಚಿ. ನ. ಮಂಗಳ ರವರು ವಿವರಿಸಿದ್ದರು.

ಮಹಿಳಾ ಅಧ್ಯಯನವನ್ನು ಈ ವರ್ಷದಿಂದ ಪದವಿ ತರಗತಿಗಳಲ್ಲಿ ಐಚ್ಛಿಕ ವಿಷಯವಾಗಿ ಅಳವಡಿಸುತ್ತಿದ್ದಾರೆ. "ಮಹಿಳೆಯ ಚಾರಿತ್ರಿಕ ಬೆಳವಣಿಗೆ" ಅಧ್ಯಯನದ ವ್ಯಾಪ್ತಿ, ಹುಟ್ಟು, ಗುಣ, ಸ್ವರೂಪ, ಉದ್ದೇಶ ಗುರಿಗಳಿರುವ ಪಠ್ಯದಲ್ಲಿ ಪ್ರಾಚೀ ಬೈಬಿಲೋನಿಯ, ಮೆಸಪೊಟೋಮಿಯ, ಚೈನಾ, ಗ್ರೀಸ್ ಮತ್ತು ಇಂಡಿಯಾದ ನಾಗರೀಕತೆಗಳ ಹೆಂಗಸರ ಚಾರಿತ್ರಿಕ ಅಧ್ಯಯನವಿದೆ. "ಮಧ್ಯ ಕಾಲ ಮತ್ತು ಆಧುನಿಕ ಕಾಲದ ಮಹಿಳೆ" ರಾಷ್ಟ್ರದ ಉನ್ನತಿಯಲ್ಲಿ ಮಹಿಳೆಯರ ಪಾತ್ರಗಳನ್ನು ಅಧ್ಯಯನ ಮಾಡಲಾಗುತ್ತದೆ.

"ಮಹಿಳೆ ಮತ್ತು ಸಮಾಜ" ವಿಷಯದಲ್ಲಿ ಮಾತೃ ಪ್ರಧಾನ, ಪಿತೃ ಪ್ರಧಾನ ಕುಟುಂಬ ಪದ್ಧತಿಯಿಂದ ಮದುವೆ, ಕುಟುಂಬ ವ್ಯವಸ್ಥೆ, ತಾಯಿಯಾಗಿ ಆಕೆಯ ಜವಾಬ್ದಾರಿ ಇತ್ಯಾದಿಗಳನ್ನು ಹೇಳಲಾಗುತ್ತದೆ,

"ದುಡಿಯುವ ಮಹಿಳೆ" ಯಾಂತ್ರೀಕರಣದಿಂದ ಮಹಿಳೆಯ ಕೌಟುಂಬಿಕ ಬದುಕಿನ ಮೇಲಿನ ಪರಿಣಾಮಗಳ ಬಗ್ಗೆ ಅಧ್ಯಯನ ನಡೆಸುತ್ತದೆ.

೩ನೇ ವರ್ಷದಲ್ಲಿ ಭಾಷಾ ಪೇಪರುಗಳಿಲ್ಲದ ಕಾರಣ ಮಹಿಳಾ ಅಧ್ಯಯದಲ್ಲಿ ಎರಡು ವಿಷಯಗಳು.

೧) ಶರೀರ ವಿಜ್ಞಾನ, ಮನೋ ವಿಜ್ಞಾನ, ತತ್ವಶಾಸ್ತ್ರ, ಲಿಂಗಭೇದ, ಸ್ತ್ರೀಯರು ಮತ್ತು ಪುರುಷರ

---

ಮಹಿಳಾ ಅಧ್ಯಯವನ್ನು ಐಚ್ಛಿಕ ವಿಷಯವನ್ನಾಗಿ ಆಯ್ದುಕೊಂಡು ಪದವೀಧರರಾದ ನಂತರ ಮುಂದೇನು ? ಉದ್ಯೋಗ ದೊರೆಯುವ ಸಾಧ್ಯತೆಗಳೇನು ? ವಿದ್ಯಾರ್ಥಿಗಳಿಗೆ ಹಾಗೂ ಶಿಕ್ಷಣ ತಜ್ಞರಿಗೆ ಉಂಟಾಗುವ ಪ್ರಶ್ನೆಗಳು ಹಲವಾರು.

ಈ ಸಮಸ್ಯೆಗಳಿಗೆ ಈಗಾಗಲೇ ಕೆಲವು ಸಲಹೆಗಳನ್ನು ನೀಡಲಾಗಿದೆ. ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆ ಕುಟುಂಬಯೋಜನೆ, ಮಹಿಳಾ ಪುನರ್ವಸತಿ ಕೇಂದ್ರ, ಪೋಲಿಸ್, ಆಸ್ಪತ್ರೆ ಮುಂತಾದ ಇಲಾಖೆಗಳಲ್ಲಿ ಮಹಿಳಾ ಅಧ್ಯಯವನ್ನು ಐಚ್ಛಿಕ ವಿಷಯವನ್ನಾಯ್ದುಕೊಂಡ ಸ್ತ್ರೀಯರಿಗೆ ಮೀಸಲಾಗಿಡಬಹುದು. ಕೇಂದ್ರ ಸರ್ಕಾರ ಹಾಗೂ ರಾಜ್ಯ ಸರ್ಕಾರಗಳು ಮಹಿಳೆಯರ ಅಭಿವೃದ್ಧಿಗಾಗಿ ನಾನಾ ರೀತಿಯ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತಿರುವುದರಿಂದ ಉದೋಗಾವಕಾಶಗಳು ಕ್ರಮೇಣ ದೊರೆಯುವುದೆಂಬುದರಲ್ಲಿ ಅನುಮಾನವಿಲ್ಲ. ಸರ್ಕಾರ ಹಾಗೂ ಸಂಬಂಧ ಪಟ್ಟ ಇಲಾಖೆಗಳು ಇಂತಹ ಸಲಹೆಗಳನ್ನು ಗಂಭೀರವಾಗಿ ಪರಿಗಣಿಸಬೇಕಾಗಿದೆಯಷ್ಟೆ.

---

ಭಾವನೆಗಳು, ಪುರುಷತ್ವ, ಸ್ತ್ರೀತ್ವ ಮುಂತಾದ ವಿಷಯಗಳ ಬಗ್ಗೆ ಅಧ್ಯಯನ.

೨) ಆಧುನಿಕ ಮಹಿಳೆಯ ಸಾಧನೆ ವಿವಿಧ ರಂಗಗ ಗಳಲ್ಲಿ ಡಿಗ್ರಿ ತರಗತಿಯ ಕೊನೆಗೆ ೧೦೦ ಪುಟಗಳ ಪ್ರಬಂಧ ಇಂಗ್ಲಿಷ್ ಅಥವಾ ಕನ್ನಡದಲ್ಲಿ ಒಪ್ಪಿಸ ಬೇಕು.

ಮಹಿಳಾ ಚಳುವಳಿ ಪುರುಷರ ವಿರೋಧಿ ಎನ್ನುವ ಸೀಮಿತ ದೃಷ್ಟಿಕೋನ ಹೊಂದಿರುವ ಚಿ. ನ. ಮಂಗಳರವರು ಈ ಅಧ್ಯಯನ ಮಹಿಳಾ ಚಳುವಳಿ ಅಲ್ಲ ಎನ್ನುತ್ತಾರೆ.

## ಮಹಿಳಾ ಅಧ್ಯಯನ:—

### ಎರಡು ಅಭಿಪ್ರಾಯಗಳು ;

ಚರಿತ್ರೆಯ ವಿವಿಧ ಹಂತಗಳಲ್ಲಿ ವಿವಿಧ ಕಾರಣಗಳು ಸೇರಿ ಮಹಿಳೆಯರ ವಿಕಾಸದ ಹಿನ್ನಡೆ ಶೀಘ್ರವಾಗಿಯೂ ತೀವ್ರ ವಾಗಿಯೂ ಆಗುತ್ತಾ ಬಂದು ಸ್ತ್ರೀ ಭ್ರೂಣಗಳ ಹತ್ಯೆಯನ್ನು 'ಸತಿ', 'ವರದಕ್ಷಿಣೆ' ಮೊದಲಾದ ಹೆಸರುಗಳಲ್ಲಿ ನಡೆ ಯುವ ಹತ್ಯೆಗಳನ್ನು ಅನಾಯಾಸವಾಗಿ ಮಾಡಬಹುದಾದಂಥ ಸ್ಥಿತಿಗೆ ಬಂದು ತಲುಪಿದ್ದೇವೆ. ಮಹಿಳೆಯರು ಬದುಕುಳಿ ಯುವುದೂ ಸಮಸ್ಯೆಯಾಗಿರುವ ಈ ಸಂದರ್ಭದಲ್ಲಿ ಅವರಿಗೆ ತಮ್ಮ ವ್ಯಕ್ತಿತ್ವ ವಿಕಾಸಕ್ಕೆ, ಪ್ರತಿಭೆಯ ವಿಕಸನಕ್ಕೆ ಸಿಕ್ಕುವ ಅವಕಾಶಗಳ ಬಗ್ಗೆ ವಿವರಣೆ ಅನಗತ್ಯ. ಮಹಿಳೆಯರ, ಸಮಾ ಜದ ಈ ಅವನತಿ, ವಿಶಿಷ್ಟ ಸ್ಥಿತಿಯ ಶಾಸ್ತ್ರೀಯವಾದ, ಮುನ್ನೋಟವನ್ನು ಕೊಡಬಲ್ಲ ಅಧ್ಯಯನ ಅಗತ್ಯವೆಂದು ನನ್ನ ಭಾವನೆ.

ಈ ಅಧ್ಯಯನವನ್ನು ಕುರಿತು ನನ್ನ ಈಗಿನ ಕೆಲವು ಯೋಚನೆಗಳು ಸಂಕ್ಷಿಪ್ತವಾಗಿ ಹೀಗಿದೆ.

ಮಹಿಳಾ ಸಮಸ್ಯೆಗಳ ಸ್ವರೂಪವನ್ನು ಚಾರಿತ್ರಿಕವಾಗಿ, ವೈಜ್ಞಾನಿಕವಾಗಿ ಜಾಗತಿಕ ನೆಲೆಯಲ್ಲಿ ತಿಳಿಯಲು ಈ ಅಧ್ಯಯ ನದಲ್ಲಿ ಒತ್ತಿರಬೇಕು;

ಎಲ್ಲ ಸಂಸ್ಕೃತಿವಾಹಕಗಳಲ್ಲಿ ಲಿಂಗಭೇಧ ನೀತಿ ಕೆಲಸ ಮಾಡುವ ಬಗೆಯನ್ನು ನಿರ್ದಿಷ್ಟ ನಿದರ್ಶನಗಳೊಂದಿಗೆ ವ್ಯಾಪಕ ವಾಗಿ, ಆಳವಾಗಿ ಅಧ್ಯಯನಿಸುವ, ಸಂಶೋಧಿಸುವ ಅಗತ್ಯ ದತ್ತ ಗಮನಬೇಕು.

ಈ ಅಧ್ಯಯನ ಅಂತರ್ಶಾಸ್ತ್ರೀಯ ಅಧ್ಯಯನದ ನೆಲೆಯ ಮೇಲಿರಬೇಕು. ಮಾನವಶಾಸ್ತ್ರ, ಸಮಾಜಶಾಸ್ತ್ರ, ಜೀವ ವಿಜ್ಞಾನ ಶಾಸ್ತ್ರ, ಮನಶಾಸ್ತ್ರವೇ, ಮೊದಲಾದ ಕ್ಷೇತ್ರಗಳಲ್ಲಿ ಈಚಿನ ಸಂಶೋಧನೆಗಳ ಬೆಳಕಿನಲ್ಲಿ ಈ ಸಮಸ್ಯೆಗಳ ಪರಿಶೀಲ ನೆಗೆ ಆದ್ಯತೆಬೇಕು.

ಆಯಾ ಕ್ಷೇತ್ರಗಳಪರಿಣತರು ಈ ದೃಷ್ಟಿಕೋನದಿಂದ

ಪದವಿ ತರಗತಿಗಳಲ್ಲಿ ಐಚ್ಛಿಕ ವಿಷಯವಾಗಿ ಮಹಿಳಾ ಅಧ್ಯಯನ ಪ್ರಾರಂಭಿಸಿರುವ ಎನ್. ಎಂ. ಕೆ. ಆರ್. ವಿ. ಗುರುತರವಾದ ಅನೇಕ ಜವಾಬ್ದಾರಿಗ ಳನ್ನು ಹೊರಬೇಕಾಗಿದೆ. ಹೊಸ ಹೊಸ ಸಂಕೀರ್ಣ ಸವಾಲುಗಳನ್ನು ಎದುರಿಸಬೇಕಾಗುತ್ತದೆ. ಮಹಿಳಾ ಅಧ್ಯಯನ "ವ್ಯಕ್ತಿ ನಿಷ್ಠ" ಅಧ್ಯಯನವಾಗಿರುವುದ ರಿಂದ ಅದು ಶೈಕ್ಷಣಿಕ ಹಂತದಲ್ಲಿ ಉಳಿಯದಂತೆ ಎಚ್ಚರಿಕೆ ವಹಿಸಬೇಕು.

ರಾಜೇಶ್ವರಿ ಎಚ್. ಎಸ್. ಮತ್ತು
ಚಂಪಾವತಿ ಎಚ್. ಎಸ್.

ಮಾಡುವ ಕೆಲಸಕ್ಕೆ ಅವಕಾಶಗಳನ್ನು ಕಲ್ಪಿಸಿ ಕೊಡಬೇಕು.

ಮಹಿಳಾ ವಿವೇಚನೆಯ ವಿಚಾರ ಬೆಳೆದು ಬಂದ, ಬರುತ್ತಿ ರುವ ಬಗೆಯನ್ನೂ ಮಹಿಳಾ ಆಂದೋಲನಗಳ ಸ್ವರೂಪ, ಬೆಳ ವಣಿಗೆಯನ್ನು ತಿಳಿಯುಲು ಇಲ್ಲಿ ಅವಕಾಶವಿರಬೇಕು.

ವಿದ್ಯಾರ್ಥಿಗಳಿಗೆ ಪ್ರಾಯೋಗಿಕವಾದ ಅನುಭವವೂ ದೊರೆ ಯುವಂತೆ, ಅವರು ಈ ಕ್ಷೇತ್ರದಲ್ಲಿನ ತೊಡಗಿಕೊಳ್ಳುವಿಕೆಗೆ ಸಹಾಯ ಮಾಡುವಂತೆ ಕ್ಷೇತ್ರಕಾರ್ಯ ಸಂಬಂಧಿಯಾದ ಪಠ್ಯವಿ ರುವುದು ಗ್ರಾಮೀಣ ಹಿನ್ನೆಲೆಗೂ ಸಂಬಂಧಿಸಿದಂತೆ ಒಳ್ಳೆಯದು.

ಮಹಿಳಾ ವಿವೇಚನೆಯ ದೃಷ್ಟಿಯಿಂದ ಎಲ್ಲ ಕ್ಷೇತ್ರಗಳಲ್ಲಿ ಆಗಬೇಕಾಗಿರುವ ಬದಲಾವಣೆಗಳನ್ನು ದೃಷ್ಟಿಯಲ್ಲಿಟ್ಟುಕೊಂಡ ವಿಚಾರಗಳ, ತತ್ವಗಳ ವಿಶ್ಲೇಷಣಾತ್ಮಕ ಅಧ್ಯಯನ ಅಗತ್ಯ.

ನಮ್ಮ ಸಾಮಾಜಿಕ. ಸಾಂಸ್ಕೃತಿಕ ಸಂದರ್ಭದಲ್ಲಿ ಈ ಸಮಸ್ಯೆ ಪಡೆದಿರುವ ವಿಶೇಶ ಸ್ವರೂಪದ ವಿಶ್ಲೇಷಣೆಗೂ ಪಠ್ಯದಲ್ಲಿ ಅವ ಕಾಶ ಅವಶ್ಯ.

ಯಾವ ಕಾರಣಕ್ಕೂ ಈ ಮಹಿಳಾ ಅಧ್ಯಯನಗಳು ಹಳಿ ತಪ್ಪಬಾರದು. ಸುಧಾರಣಾವಾದೀ ಮನೋಭಾವಗಳಿಂದ, ಮೂಲತಃ ಸನಾತನ ದೃಷ್ಟಿಯಿಂದ ರೂಪಿತವಾದ ಮಹಿಳಾ ವಿರೋಧಿ ಮೌಲ್ಯಗಳು ಯಾವುದೇ ರೂಪದಲ್ಲಿ ಈ ಮಹಿಳಾ ಅಧ್ಯಯನವನ್ನು ಹೊಕ್ಕು ಇಡೀ ಅಧ್ಯಯನದ ಉದ್ದೇಶವನ್ನು ತಲೆಕೆಳಗಾಗಿಸದಂತೆ ಎಚ್ಚರ ವಹಿಸದಿದ್ದರೆ ಈ ಮಹಿಳಾ ಅಧ್ಯ ಯನಗಳ ಪ್ರಾರಂಭವನ್ನು ಕುರಿತು ನಮ್ಮ ಉತ್ಸಾಹದ ಬಗ್ಗೆ ನಾಳೆ ನಾವೇ ಪಶ್ಚಾತ್ತಾಪ ಪಡಬೇಕಾಗುತ್ತದೆ.

ಭಾವುಕವಾದ, ಅಶಾಸ್ತ್ರೀಯ ದೃಷ್ಟಿಕೋನ ನಮ್ಮಲ್ಲಿನ ಅನೇಕ ಮಂತಾದ ಗುಂಪುಗಳ ಮತೀಯ ಅಧ್ಯಯನಗಳಿಗೆ ಒದ ಗಿರುವ ಸ್ಥಿತಿ ಮಹಿಳಾ ಅಧ್ಯಯನಗಳಿಗೆ ಬರಬಾರದು.

'ಮಹಿಳಾ ಅಧ್ಯಯನವನ್ನು' ಒಂದು ಸಾಮಾನ್ಯ ವಿಷ ಯವಾಗಿಯೂ, ಐಚ್ಛಿಕ ವಿಷಯಗಳಲ್ಲಿ ಒಂದಾಗಿಯೂ, ಒಂದ ಪದವಿ ಅಥವಾ ಡಿಪ್ಲೊಮಾಕ್ಕೆ ಮಾಡುವ ವಿಶೇಷ ಪ್ರತ್ಯೇಕ

ವಿಷಯವಾಗಿಯೂ ಅಧ್ಯಯನ ಮಾಡಬಹುದು. ವಿಶೇಷ ಅಧ್ಯಯನ ನಂತರ ಇಲ್ಲಿಯೂ ಸಂಶೋಧನೆ, ಪ್ರಕಟಣೆಗಳಿಗೆ ಸರಿಯಾದ ಅವಕಾಶಗಳಿರಬೇಕು. ಈ ದಿಕ್ಕಿನಲ್ಲಿ ಆಸಕ್ತಿಯುಳ್ಳ ನಮ್ಮ ರಾಜ್ಯದ ಎಲ್ಲ ವಿಶ್ವವಿದ್ಯಾನಿಲಯಗಳು ಹಾಗೂ ಮತ್ತಿತರ ಆಸಕ್ತರು ಪರಿಣತರು ಅನೇಕ ಸಮಾಲೋಚನೆಗಳ ನಂತರ ಸರಿಯಾದ ಸಿದ್ಧತೆಯೊಂದಿಗೆ ಒಂದು ವಿಶ್ವವಿದ್ಯಾನಿಲಯ ಈ ಅಧ್ಯಯನವನ್ನು ಪ್ರಾರಂಭಿಸಿ, ಕ್ರಮೇಣ ಅಗತ್ಯಕ್ಕನುಗುಣವಾಗಿ ತಿದ್ದುಪಡಿ ಪುನರ್ರಚನೆ ಮಾಡಿಕೊಳ್ಳಬಹುದು.

ವಿಜಯಾ ದಬ್ಬೆ
ರೀಡರ್
ಮೈಸೂರು ವಿಶ್ವವಿದ್ಯಾಲಯ.

ಇತಿಹಾಸದ ಹಾಗೂ ಘಟನೆಗಳನ್ನು ಮಹಿಳಾ ದೃಷ್ಟಿಕೋನದಿಂದ ವಿಶ್ಲೇಷಿಸುವ ಮಹಿಳಾ ಅಧ್ಯಯನ ಇಂದು ಅತ್ಯಗತ್ಯ: ಶತಮಾನಗಳಿಂದ ಹರಿದು ಬಂದ ಅನುಭವಗಳನ್ನು ಪರಿಶೀಲಿಸಲು ಅವುಗಳಿಗೆ ಅರ್ಥ ನೀಡಲು ಮ. ಅ. ದಿಂದ ಸಾಧ್ಯ.

ಪುರುಷ ಪ್ರಧಾನ ಸಮಾಜ ಸ್ತ್ರೀಯರನ್ನು ಚಿತ್ರಿಸಿರುವುದಕ್ಕಿಂತ ಭಿನ್ನವಾಗಿ ಅವರ ಜೀವನ ಹಾಗೂ ಸ್ಥಿತಿಗತಿಯ ಬಗ್ಗೆ ಹೊಸ ಹೊಳಪುಗಳನ್ನು ಇದು ನೀಡುತ್ತದೆ. ಸ್ತ್ರೀಯರು ತಮ್ಮಲ್ಲಿರುವ ಸಂಘಟನಾ ಶಕ್ತಿಯನ್ನು ಅರಿತುಕೊಳ್ಳಲು ಇದು ಪೂರಕವಾಗುತ್ತದೆ.

ಆದರೆ ಇಂತಹ ಶಿಕ್ಷಣ ಕೇವಲ ಸ್ತ್ರೀಯರಿಗೆ ಹಾಗೂ ಒಂದು ನಿರ್ದಿಷ್ಟ ವಯಸ್ಸಿಗೆ ಸೀಮಿತವಾಗಬಾರದು. ತಾರತಮ್ಯ ಹಾಗೂ ವ್ಯತ್ಯಾಸಗಳ ಪರಿಚಯವಾಗುವುದರಿಂದ ಆರೋಗ್ಯಪೂರ್ಣ ಹಾಗೂ ವಸ್ತುನಿಷ್ಠ ದೃಷ್ಟಿಕೋನವನ್ನು ಇದು ಬೆಳೆಸುತ್ತದೆ.

ಮಹಿಳಾ ಅಧ್ಯಯನವೆಂದರೆ ಸಂಪ್ರದಾಯಕ ಅಧ್ಯಯನವಲ್ಲ. ಜನರಲ್ಲಿ ಸ್ತ್ರೀಪುರುಷರೆಂಬ ತಿಳುವಳಿಕೆಯ ಭೇದವನ್ನು ಅಳಿಸಿ ಹಾಕುವಂತೆ ಜಾಗೃತಿಯನ್ನು ಮಹಿಳಾ ಅಧ್ಯಯನ ಮೂಡಿಸಬೇಕಾಗಿದೆ.

ಡಾ॥ ಇಂದಿರಾ.ಜೈ. ಪ್ರಕಾಶ್
ರೀಡರ್
ಬೆಂಗಳೂರು ವಿಶ್ವವಿದ್ಯಾಲಯ

**ಕೃಪೆ: ಸುದ್ದಿ ಸಂಗಾತಿ**

ಬಿಹಾರಿನಲ್ಲಿ ಧನಬಾದ್ ಬಳಿ ಏಳುಘಂದಿ ಪೊಲೀಸರು ಒಬ್ಬ ಆದಿವಾಸಿ ಹುಡುಗಿಯನ್ನು ರಸ್ತೆಯಲ್ಲಿ ಹತ್ತಾರು ಜನರೆದುರಿನಲ್ಲಿ ಸೀರೆ ಕಿತ್ತು ಹಾಕಿ ಕುಪ್ಪಸವನ್ನು ಸೆಳೆದು, ಲಾರಿಯಿಂದ ಚಚ್ಚಿ ಹೊರಟುಹೊದರೆಂಬ ಸುದ್ದಿಯನ್ನು ಅನೇಕ ಪತ್ರಿಕೆಗಳು ವರದಿ ಮಾಡಿವೆ. ಹುಡುಗಿ ಮನೆಯಲ್ಲಿ ಒಬ್ಬಳೇ ಇದ್ದಾಗ ಅವಳ ಮನೆಗೆ ನುಗ್ಗಿ ಮಾನಭಂಗ ಮಾಡಲು ಯತ್ನಿಸಿ, ಅವಳು ಕೂಗಿಕೊಂಡು ರಸ್ತೆಗೆ ಓಡಿದಾಗ ಈ ಪೈಶಾಚಿಕ ರೀತಿಯಲ್ಲಿ ಅಪಮಾನ ಮಾಡಿ ಜ್ಞಾನ ತಪ್ಪುವವರೆಗೆ ಸಾರ್ವಜನಿಕ ರಸ್ತೆಯಲ್ಲಿ ಹೊಡೆದರೆನ್ನುವ ಸುದ್ದಿ ಓದಿದ ಯಾರ ರಕ್ತವನಾದರೂ ಕುದಿಯುವಂತೆ ಮಾಡುತ್ತವೆ.

ಭಾರತದ ಯಾವುದೇ ಮೂಲೆಯಲ್ಲಿ ಮಹಿಳೆಗೆ ಅಪಮಾನವಾದರೆ ಎಲ್ಲ ಭಾರತೀಯರಿಗೆ ಅಪಮಾನ ಎಂದು ನಾವು ಅದರಲ್ಲಿಯೂ ಮಹಿಳೆಯರು, ಗುರುತಿಸಬೇಕು. ಆದಿವಾಸಿ ಹೆಣ್ಣು ಮಕ್ಕಳಂತೂ ಎಲ್ಲರ ಬಿಟ್ಟಿ ಸ್ವತ್ತು ಎನ್ನುವಂತೆ ಇಂದಿಗೂ ಹಲವೆಡೆಗಳಲ್ಲಿ ಕಾಣಲಾಗುತ್ತದೆ. ಎರಡು ವರ್ಷಗಳ ಹಿಂದೆ ಕೆಲವರು ಪೊಲೀಸ್ ಅಧಿಕಾರಿಗಳ ಆದಿವಾಸಿ ಮಹಿಳೆಯರು ಸುಸ್ತಾಗಿ ಕುಸಿಯುವವರೆಗೆ ನಗ್ನರಾಗಿ ನೃತ್ಯ ಮಾಡಿಸಿದರೆಂಬ ವರದಿ ಪ್ರಕಟವಾಗಿತ್ತು.

ಕರ್ನಾಟಕದ ಮಹಿಳೆಯರ ಸಂಘಗಳು ಪ್ರತಿಭಟಿಸಿ ಧ್ವನಿ ಎತ್ತಬೇಕು. ತನ್ನ ಪ್ರತಿನಿಧಿಗಳನ್ನು ಬಿಹಾರಿನ ಮುಖ್ಯಮಂತ್ರಿಗಳನ್ನು ಬೂಟಾಸಿಂಗ್‌ರನ್ನೂ ಕಾಣಲು ಕಳಿಸಬೇಕು. ಅಖಿಲ ಭಾರತ ಮಹಿಳಾ ಸಂಸ್ಥೆಗಳನ್ನು ಎಚ್ಚರಿಸಬೇಕು. ದೆಹಲಿ, ಪಟ್ನಾಗಳಲ್ಲಿರುವ ಮಹಿಳಾ ಸಂಸ್ಥೆಗಳು ಸಾಕಷ್ಟು ಪ್ರಬಲವಾಗಿ ಪ್ರತಿಭಟಿಸುವಂತೆ ಕಾರ್ಯಪ್ರವೃತ್ತರಾಗಬೇಕು. ದೆಹಲಿಯಲ್ಲಿ ಪಟ್ನಾದಲ್ಲಿ ಇರುವ ಮಹಿಳಾ ಸಚಿವರು ಏನು ಮಾಡುತ್ತಿದ್ದಾರೆ ಎಂದು ಕೇಳಬೇಕು. ರಾಷ್ಟ್ರೀಯ ರಾಜಕೀಯ ಪಕ್ಷಗಳು ಇಂತಹ ಸಂದರ್ಭದಲ್ಲಿ ಏಕೆ ಮೂಕವಾಗಿರುತ್ತವೆ "ರಾಮಾಯಣ, ಮಹಾಭಾರತ" ಗಳನ್ನು ದೂರದರ್ಶನದಲ್ಲಿ ಆ ಪಕ್ಷಗಳವರು ನಾವು ಎಲ್ಲ ನೋಡುತ್ತೇವೆ ಬೇರೆ!

ಎಲ್. ಎಸ್. ಶೇಷಗಿರಿ ರಾವ್ (ಪ್ರಜಾವಾಣಿ ವಾಚಕರ ವಾಣಿಯಿಂದ)

# ಮೀಡಿಯಾ

ದುರಂತ ನಾಟಕಗಳಿಗೆ ಪ್ರಸಿದ್ಧವಾಗಿರುವ ಗ್ರೀಕ್ ನಾಟಕಗಳಲ್ಲಿ ಮೀಡಿಯಾವೂ ಒಂದಾಗಿದೆ. ಯೂರಿಪಿಡೀಸ್‌ನ ರಚನೆಯಾದ ಈ ನಾಟಕ ದೂರದರ್ಶನದಲ್ಲಿ ಮಾಲತಿಯವರ ನಿರ್ದೇಶನದಲ್ಲಿ ಬಿತ್ತರಗೊಂಡಿದೆ.

ಒಲಿದರೆ ನಾರಿ ಮುನಿದರೆ ಮಾರಿ ಎನುವಂತೆ ಮೀಡಿಯಾ ಕಾಣಿಸಿಕೊಳ್ಳುತ್ತಾಳೆ. ತಂದೆಯ ಶತ್ರುವಾಗಿ ಬಂದ ಜೇಸನ್‌ನನ್ನು ಅವನಿಗೆ ತನ್ನ ಸಹಾಯ ಹಸ್ತವನ್ನೀಯುತ್ತಾಳೆ. ಆದರೆ ಜೇಸನ್ ಇವಳ ಪ್ರೀತಿ - ತ್ಯಾಗಗಳನ್ನ ಲೆಕ್ಕಿಸದೆ ತನ್ನ ಭೋಗಕ್ಕಾಗಿ ಕಾರಿಂಥಿನ್‌ನ ರಾಜ ಕ್ರಿಯಾನ್‌ನ ಮಗಳಾದ ಗ್ಲಾಶೆಯನ್ನು ಮದುವೆಯಾಗುತ್ತಾನೆ. ಈ ಘಟನೆಯಿಂದ ಸಿಟ್ಟಿಗೆದ್ದ ಮೀಡಿಯಾ ಯಾವ ರೀತಿಯಲ್ಲಾದರೂ ಸೇಡು ತೀರಿಸಿಕೊಳ್ಳಬಹುದೆಂದು ಹೆದರಿದ ಕ್ರಿಯಾನ್ ದೇಶದಿಂದ ಹೊರಹೋಗುವಂತೆ ಮೀಡಿಯಾ ಮತ್ತು ಮಕ್ಕಳಿಗೆ ಆಜ್ಞಾಪಿಸುತ್ತಾನೆ. ಮೊದಲೆ ಕೋಪಗೊಂಡಿದ್ದ ಮೀಡಿಯಾ ಈಗ ಹೆಡೆಮೆಟ್ಟಿದ ಸರ್ಪಿಣಿಯಂತಾಗುತ್ತಾಳೆ.

ಮೀಡಿಯಾಳನ್ನ ಬೇಟಿಯಾಗಲು ಬಂದ ಜೇಸನ್‌ಗೆ ಮೀಡಿಯಾ ತಾನು ಅವನಿಗೆ ಮಾಡಿದ ಉಪಕಾರವನ್ನು ನೆನಪಿಸುತ್ತಾಳೆ. ಆದರೆ ಜೇಸನ್ ತಾನು ಈ ಮದುವೆಯಾಗಿರುವುದು ಮೀಡಿಯಾ ಮತ್ತು ಮಕ್ಕಳ ಭವಿಷ್ಯವನ್ನು ಭದ್ರಪಡಿಸಲೆಂದು ಎನ್ನುತ್ತಾನೆ. ಇದರಿಂದ-ಹೇಸಿದ ಮೀಡಿಯಾ ಅವನ ವಿರುದ್ಧ ಸೇಡು ತೀರಿಸಿ ಕೊಳ್ಳಲು ನಿಶ್ಚಯಿಸುತ್ತಾಳೆ. ಅದೇ ವೇಳೆಗೆ ಅಲ್ಲಿಗೆ ಬಂದ ಅಥೆನ್ಸ್‌ನ ರಾಜನಲ್ಲಿ ತನಗೆ ಆಶ್ರಯ ಕೇಳುತ್ತಾಳೆ. ಸಂತಾನ ಹೀನನಾದ ಅವನಿಗೆ ತನ್ನ ವಿದ್ಯೆಯಿಂದ ಸಂತಾನ ಪ್ರಾಪ್ತಿಯಾಗುವಂತೆ ಮಾಡುವುದಾಗಿ ವಾಗ್ದಾನ ನೀಡುತ್ತಾಳೆ. ಚಾಣಾಕ್ಷೆಯೆಂದು ಬಿರುದು ಪಡೆದಿರುವ ಮೀಡಿಯಾ ತನ್ನ ದ್ವೇಶ ಮತ್ತು ತಿರಸ್ಕಾರಗಳನ್ನು ಗೌಪ್ಯವಾಗಿಟ್ಟು, ಮಕ್ಕಳನ್ನ ಗಡೀಪಾರಿನಿಂದ ಪಾರುಮಾಡುವಂತೆ ಕೇಳುವ ನೆಪದಿಂದ ಗ್ಲಾಶೆಯನ್ನು ಕೊಲ್ಲಲು ಸಂಚು ಮಾಡುತ್ತಾಳೆ. ಅದಕ್ಕಾಗಿ ಮಕ್ಕಳೊಂದಿಗೆ ಉಡುಗೊರೆಯಾಗಿ ಕೊಡುವಂತೆ ವಿಷಲೇಪನ ಮಾಡಿದ ವಸ್ತ್ರ ಹಾಗೂ ಕಿರೀಟವನ್ನು ಕಳುಹಿಸುತ್ತಾಳೆ. ಇವುಗಳನ್ನು ಧರಿಸಿದ ನವವಧು ಗ್ಲಾಶೆ ಸಾಯುತ್ತಾಳೆ. ಅವಳನ್ನು ಮುಟ್ಟಿದ ಕ್ರಿಯಾನ್ ಸಹ ಮರಣ ಹೊಂದುತ್ತಾನೆ. ಇದರಿಂದ ಅರ್ಧ ಸೇಡನ್ನು ತೀರಿಸಿಕೊಂಡ ಮೀಡಿಯಾ ತನ್ನ ಮಕ್ಕಳನ್ನು ಕೊಂದು ಜೇಸನ್‌ನ ಮೇಲಿದ್ದ ತನ್ನ ಪೂರ್ತಿ ಸೇಡನ್ನು ತೀರಿಸಿ ಕೊಳ್ಳುತ್ತಾಳೆ.

ಮೀಡಿಯಾ ಬುದ್ಧಿವಂತೆ ಮತ್ತು ಚಾಣಾಕ್ಷೆ. ಆಕೆ ಅಪಮಾನವನ್ನೆಂದೂ ಸಹಿಸಳು. ಅದಕ್ಕಾಗಿ ಗ್ಲಾಶೆಗೆ ಉಡುಗೊರೆ ಕೊಟ್ಟ ಮಕ್ಕಳನ್ನು ಬೇರೊಬ್ಬರು ಕೊಲ್ಲುವುದಕ್ಕೆ ಮುಂಚೆ ತಾನೇ ಕೊಲ್ಲುತ್ತಾಳೆ. ಹಾಗೆಯೇ ಶತ್ರುಗಳಿಂದ ನಗೆಗೀಡಾಗುವುದನ್ನು ಇಚ್ಛಿಸುವುದಿಲ್ಲ. ಅವಳು ತನ್ನನ್ನೆಂದೂ ಅಬಲೆ ಎನಿಸಿಕೊಳ್ಳಲು ಇಷ್ಟ ಪಡುವುದಿಲ್ಲ. "ಎಲ್ಲವನ್ನೂ ಸಹಿಸಿಕೊಂಡು ಹೋಗುವ ಹೀನ ದುರ್ಬಲಳೆಂದು ಯಾರೂ ತಿಳಿಯದಿರಲಿ" ಎಂಬ ಮಾತುಗಳಲ್ಲಿ ತಿಳಿಯಬಹುದು. ಕ್ರಿಯಾನ್ ಮೀಡಿಯಾಳನ್ನು ಒಂದು ಕ್ಷಣ ನಂಬಲಿಕ್ಕೂ ಸಿದ್ಧನಿಲ್ಲ. ಆದ್ದರಿಂದಲೇ ಆಕೆಗೆ. ದೇಶದಿಂದ ಹೊರ ಹೋಗುವಂತೆ ಹೇಳಿ. "ನೀನೊಬ್ಬ ಜಾಣ ಹೆಂಗಸು ಕರಾಳವಿದ್ಯೆಗಳಲ್ಲಿ ನಿಷ್ಣಾತೆ", ಮುಂದುವರೆಸಿ ಉಗ್ರಕೋಪದ ಹೆಣ್ಣಾಗಲಿ ಗಂಡಾಗಲಿ ತಣ್ಣನೆಯ ಕುಶಾಗ್ರಮತಿಯ ವೈರಿಗಳಂತೆ ಅಪಾಯಕಾರಿಗಳಲ್ಲವೆಂಬಲ್ಲಿ ವಮೀಡಿಯಾಳನ್ನು ಇರಗೊಟ್ಟರೆ ಅಪಾಯವನ್ನ ತಾನೇ ಎದುರುಗೊಂಡಂತೆ ಎನ್ನುತ್ತಾನೆ.

ಮೀಡಿಯಾ ಸ್ವಾಭಿಮಾನಿ, ತನ್ನ ವ್ಯಕ್ತಿತ್ವದ ಬಗ್ಗೆ ಅಪಾರ ಕಾಳಜಿಯುಳ್ಳವಳು, ಜೇಸನ್‌ನಿಂದ ವಂಚಿಸಲ್ಪಟ್ಟ ಆಕೆಯು ಅಳಲು ಸಂಪ್ರದಾಯದ ಗೋಡೆಗಳ ಮಧ್ಯೆ ಉಸಿರಾಡುವ ಸ್ತ್ರೀ ಸಮೂಹವನ್ನು ಪ್ರತಿನಿಧಿಸುತ್ತದೆ. ಸಂಪ್ರದಾಯದ ಚೌಕಟ್ಟನ್ನು ಮೀರಿ ಬೆಳೆದ ಅವಳ ಆಂತರಿಕ ನೋವು ದುಮ್ಮಾನ ಸಂಕೀರ್ಣ ದನಿ ಪಡೆಯುತ್ತದೆ. ತನ್ನ ಮಕ್ಕಳನ್ನು ತಾನೆ ಬಲಿಕೊಡುವುದು ಅಮಾನುಷವಾದರೂ, ಗಂಡಿಗೆ ಸಂತಾನ ವಂಶೋದ್ಧಾರಕ್ಕಷ್ಟಲ್ಲದೇ ಸಾಮಾಜಿಕ, ರಾಜಕೀಯವಾಗಿಯೂ ಬಹುಮುಖ್ಯವೆಂದರಿತ ಮೀಡಿಯಾ ಜೇಸನ್ ಬದುಕಿನುದ್ದಕ್ಕೂ ಆ ಕೊರಗು. ಹಿಂಸೆಗಳಿಂದಲಿ ದಹಿಸಿಹೋಗಲೆಂಬ ಹಠ ಆಕೆಗೆ. ಕ್ರೋಧ ದ್ವೇಷದ ಮೂರ್ತಿಯಾಗಿ ಮೀಡಿಯಾ ಪಾತ್ರಕ್ಕೆ ಜೀವ ತುಂಬಿದ ಮಾಲತಿಯವರ ಅಭಿನಯ ಪ್ರಶಂಸನೀಯ. ದಾದಿಯಾಗಿ ನಳಿನಾ ಮೂರ್ತಿಯವರ ಅಭಿನಯವೂ ಶ್ಲಾಘನೀಯ.

**ಅನ್ನಪೂರ್ಣೇಶ್ವರಿ ಜಿ. ಎಸ್.**

# ವಿ. ಪಿ. ಸಿಂಗ್ ಹಾಗೂ ಮಹಿಳಾ ಸಮಾವೇಶ

ಯಾವುದೇ ರಾಜಕೀಯ ಪಕ್ಷ ಅಧಿಕಾರದ ಗದ್ದುಗೆಯೇರುವ ಹುನ್ನಾರದಲ್ಲಿ ಜನರಿಗೆ ಹುಸಿ ಭರವಸೆಗಳನ್ನು ನೀಡುವುದು ಸರ್ವೇ ಸಾಮಾನ್ಯವಾಗಿಬಿಟ್ಟಿದೆ, ಚುನಾವಣೆಯ ಸಮಯದಲ್ಲಿ ಪ್ರತಿಯೊಂದು ರಾಜಕೀಯ ಪಕ್ಷವೂ ಇಂತಹ ಪೊಳ್ಳು ಆಶ್ವಾಸನೆಗಳನ್ನು, ಅದರಲ್ಲೂ ಹಿಂದುಳಿದ ವರ್ಗದವರಿಗೆ, ಮಹಿಳೆಯರಿಗೆ ನೀಡುವುದರಲ್ಲಿ ಪೈಪೋಟಿಯನ್ನು ನಡೆಸುತ್ತವೆ. ಅವರನ್ನು ಕಿತ್ತು ತಿನ್ನುವ ಸಮಸ್ಯೆಗಳನ್ನು ಬಂಡವಾಳ ಮಾಡಿಕೊಂಡು ತಮ್ಮ ಪ್ರಗತಿ ಪರತೆಯ ಮುಖವಾಡವನ್ನು ಜನರೆದುರು ಪ್ರದರ್ಶಿಸುತ್ತವೆ.

ಸದಾ ಸುದ್ದಿಯಲ್ಲಿರುವ ಜನತಾದಳದ ವಿ. ಪಿ. ಸಿಂಗ್ ನ್ಯಾಶನಲ್ ಫ್ರಂಟ್ - ರಾಷ್ಟ್ರೀಯ ರಂಗದ ಪ್ರಣಾಳಿಕೆಯನ್ನು ರೂಪಿಸುವಲ್ಲಿ ಭಾರತದ ಸ್ತ್ರೀ ಸಮುದಾಯದ ಬಗ್ಗೆ ತಮ್ಮ ದ್ವಿಮುಖ ನೀತಿಯನ್ನು ಪ್ರತಿಬಿಂಬಿಸಿದ್ದಾರೆ. ವಿ. ಪಿ. ಸಿಂಗ್‌ರ ಈ ನೀತಿ ಪ್ರತಿಯೊಂದು ರಾಜಕೀಯ ಪಕ್ಷಗಳು ಅಳವಡಿಸಿಕೊಳ್ಳುತ್ತಿರುವ ಧೋರಣೆಯ ಕನ್ನಡಿಯೂ ಆಗಿದೆ.

"ರಾಷ್ಟ್ರದ ರಾಜಕೀಯ ಸಂಸ್ಕೃತಿಯ ಬದಲಾವಣೆಗಾಗಿ ಇತ್ತೀಚೆಗೆ ರಾಷ್ಟ್ರೀಯ ರಂಗದ (ರಾ. ರಂ.) ಮೊದಲ ಮಹಿಳಾ ಅಧಿವೇಶನವನ್ನು ಕರೆಯಲಾಗಿತ್ತು. ರಾಷ್ಟ್ರದ ವಿವಿಧ ಮೂಲೆಗಳಿಂದ ಬಂದ ಮಹಿಳಾ ಪ್ರತಿನಿಧಿಗಳು ಆ ಸಮಾವೇಶದಲ್ಲಿ ಭಾಗವಹಿಸಿದ್ದರು.

ಮಹಿಳೆಯರನ್ನು ಶತಮಾನಗಳಿಂದ ಉಸಿರುಗಟ್ಟಿಸುವ ವಾತಾವರಣದಲ್ಲಿ ಬದುಕುವಂತೆ ಮಾಡಿರುವ ಹಾಗೂ ಜಡ್ಡುಗಟ್ಟಿದ "ಪರ್ಸನಲ್ ಲಾ" -ವನ್ನು ಪ್ರಣಾಳಿಕೆಯಲ್ಲಿ ಸೇರಿಸಿಕೊಳ್ಳದಂತೆ ತುಂಬಾ ಚಾಣಾಕ್ಷತನದ ವಾದವನ್ನು ಮಹಿಳೆಯರ ಮುಂದಿಡಲಾಗಿದೆ. ಇತರ ಶೋಷಿತ ವ್ಯವಸ್ಥೆಗಳೊಂದಿಗೆ ಸ್ತ್ರೀಯರ ವ್ಯಕ್ತಿತ್ವವನ್ನೂ ನಾಶಮಾಡುತ್ತಿರುವ ಹಾಗು ಅವರ ನಿರಂತರ ಹಿಂದುಳಿಯುವಿಕೆಗೆ ಕಾರಣವಾದ ಮತಾಂಧತೆಯ ಪ್ರಶ್ನೆಯನ್ನೂ ರಾಜಕೀಯ ಉದ್ದೇಶಗಳಿಗಾಗಿ ಉದ್ದೇಶಪೂರ್ವಕವಾಗಿ ನಿರ್ಲಕ್ಷಿಸಲಾಗುತ್ತಿದೆ.

ರಾಷ್ಟ್ರದ ಪ್ರಮುಖ ಆಗುಹೋಗುಗಳಲ್ಲಿ ಸ್ತ್ರೀಯರು ನಿರ್ಣಾಯಕ ಪಾತ್ರ ವಹಿಸುವ ಅವಶ್ಯಕತೆಯ ನಿರ್ಣಯವನ್ನು ತೆಗೆದುಕೊಳ್ಳಲಾಗಿದ್ದರೂ ಏಕರೂಪ ಸಂಹಿತೆಯ ಬಗ್ಗೆ ಜನತಾದಳದ ನಾಯಕ ವಿ. ಪಿ. ಸಿಂಗ್ ಮಹಿಳೆಯರ ಮುಂದಿಟ್ಟ ವಾದ ಅವರ ಅವಕಾಶವಾದಿ ರಾಜಕೀಯ ನಿಲುವನ್ನು ಪ್ರತಿಬಿಂಬಿಸುತ್ತದೆ. ಯೂನಿಫಾರಂ ಸಿವಿಲ್ ಕೋಡ್ ಅಳವಡಿಸಿಕೊಳ್ಳುವಷ್ಟು ಭಾರತ ಇನ್ನೂ ಮುಂದುವರಿಲ್ಲವೆಂಬ ಆಧಾರದ ಮೇಲೆ ಅದನ್ನು ಪ್ರಣಾಳಿಕೆಯಿಂದ ಕೈಬಿಡಲಾಗಿದೆ. ವಿ. ಪಿ. ಸಿಂಗ್ ರಾ. ರಂ. ಪರ್ಸನಲ್ ಲಾವನ್ನು ರದ್ದುಗೊಳಿಸುವುದನ್ನು ಕಟುವಾಗಿ ವಿರೋಧಿಸುತ್ತದೆಯೆಂದೂ ನುಡಿದಿದ್ದಾರೆ.

ಆದರೆ ಅಧ್ಯಕ್ಷೆಯಾದ ಶ್ರೀಮತಿ ಪ್ರಮೀಳಾ ದಂಡವತೆಯವರು ತಮ್ಮ ಪಕ್ಷವು ಅಧಿಕಾರಕ್ಕೆ ಬಂದರೆ, ಆಸ್ತಿಹಕ್ಕು, ವೈವಾಹಿಕ ಸಂಸ್ಥೆ, ಪಿತ್ರಾರ್ಜಿತ ಆಸ್ತಿ' ಮುಂತಾದವುಗಳಲ್ಲಿ ಸಮಾನ ಹಕ್ಕುಗಳಿಗೆ ಅವಕಾಶ ನೀಡುವ "ಏಕರೂಪ ನ್ಯಾಯಸಂಹಿತೆ" ಯನ್ನು ರೂಪಿಸುವಲ್ಲಿ ಪ್ರಯತ್ನಿಸುತ್ತದೆಯೆಂದು ಹೇಳುವುದರ ಮೂಲಕ ವಿ. ಪಿ. ಸಿಂಗ್‌ರ ಹೇಳಿಕೆಗೆ ತದ್ವಿರುದ್ಧವಾದ ಭರವಸೆಯನ್ನೂ ಮಹಿಳೆಯರಿಗೆ ನೀಡಿದ್ದಾರೆ.

ಅಂತಿಮವಾಗಿ ಪ್ರಣಾಳಿಕೆಯಲ್ಲಿ ಸ್ತ್ರೀಯರ ಹಕ್ಕುಭಾಧ್ಯತೆಗಳನ್ನು ರಕ್ಷಿಸುವ ನಾಟಕದಲ್ಲಿ ಅವರನ್ನು ರಾಜಕೀಯ ಜೀವನದಿಂದ ದೂರಿಡುವ ನಾಮಕಾವಸ್ಥೆಯ ಅಭಿವೃದ್ಧಿಯ ಅಂಶಗಳನ್ನು ಅಳವಡಿಸಿಕೊಳ್ಳಲಾಗಿದೆ. ಕಾಂಗ್ರೆಸ್ ಮಹಿಳೆಯರ ಸಮಸ್ಯೆಗಳನ್ನು ಬಂಡವಾಳ ಮಾಡಿಕೊಳ್ಳುತ್ತಿದೆಯೆಂದು ಟೀಕಿಸುವ ಜನತಾದಳ ಸಹ ಸ್ತ್ರೀಯರನ್ನು ಮತಪೆಟ್ಟಿಗೆಯ ಕುರಿಗಳೆಂಬಂತೆ ತನ್ನ ಅವಕಾಶವಾದಿ ರಾಜಕೀಯ ಸಂಸ್ಕೃತಿಯನ್ನು ಬಿಂಬಿಸಿದೆ. ಸ್ತ್ರೀಯರ ಮೇಲೆ ನಡೆಯುತ್ತಿರುವ ಅಪರಾಧದ ಅಂಕಿ-ಅಂಶ ಬೆಚ್ಚಿ ಬೀಳಿಸುವಂತಿದೆ. ಇತ್ತೀಚೆಗೆ ಲೋಕಸಭೆಯಲ್ಲಿ ಪ್ರಕಟಿಸಿದ ಅಂಶದ ಪ್ರಕಾರ ೧೯೮೬ರಿಂದ ೧೯೮೮ರವರೆಗೆ ಸ್ತ್ರೀಯರ ಮೇಲೆ ನಡೆದಿರುವ ಅಪರಾಧದ ಸಂಖ್ಯೆಯಲ್ಲಿ ಹೆಚ್ಚಳ ಉಂಟಾಗಿದೆ. ಸ್ತ್ರೀಯರ ಸಮಸ್ಯೆಗಳನ್ನು ಬಂಡವಾಳ ಮಾಡಿಕೊಳ್ಳುವುದು ನಿಲ್ಲುವವರೆಗೆ ಅವರ ಸ್ಥಾನಮಾನದಲ್ಲಿ ಕಿಂಚಿತ್ತು ಸುಧಾರಣೆಯಾಗುವುದೂ ಅಸಾಧ್ಯ.

ರಾಜೇಶ್ವರಿ ಎಚ್. ಎಸ್.

# ಆರೋಗ್ಯ

## ಋತುಸ್ರಾವದ ತೊಂದರೆಗಳು



ಮುಟ್ಟಿನ ಅನುಭವ ಒಬ್ಬೊಬ್ಬರಿಗೆ ಒಂದೊಂದು ರೀತಿಯದು. ಕೆಲವರು ಅದನ್ನು ಸ್ವಾಗತಿಸಿದರೆ, ಕೆಲವರಿಗೆ ಅದು ವಿಪರೀತ ತ್ರಾಸದಾಯಕ. ಕಿರಿಯರಿಗೆ ಮುಟ್ಟಿನ ಬಗ್ಗೆ ಸರಿಯಾದ ತಿಳುವಳಿಕೆ ನೀಡಿ ಜೀವನದ ಹೊಸ ಅಧ್ಯಾಯವನ್ನು ಸ್ವೀಕರಿಸಲು ನಾವು ಸಹಾಯ ಮಾಡಬೇಕು.

ಮುಟ್ಟಿನ ಸ್ರಾವವು ಯೋನಿಯ ಲೋಳೆಯಂಥ ದ್ರವ, ಗರ್ಭಕೋಶದಲ್ಲಿ ಕಳಚಿಹೋದ ಲೋಳೆಯಂತಹ ಪೊರೆ, ಹಾಗು ರಕ್ತದಿಂದ ಕೂಡಿರುತ್ತದೆ. ಹೀಗೆ ಪ್ರತಿಸಾರಿಯು ಕಳೆದುಕೊಳ್ಳುವ ರಕ್ತದಿಂದ ರಕ್ತಹೀನತೆ ಉಂಟಾಗುತ್ತದೆ. ರಕ್ತಸ್ರಾವವು ವಾಸನೆಯಿರುವುದಿಲ್ಲ. ಗಾಳಿಯಲ್ಲಿ ಬ್ಯಾಕ್ಟೀರಿಯಾ ಸಂಪರ್ಕ ಉಂಟಾದಾಗ ಮಾತ್ರ ಅದು ಕೊಳೆತು ವಾಸನೆ ಬರುತ್ತದೆ.

ಮುಟ್ಟು, ಅನೇಕ ಮಹಿಳೆಯರಿಗೆ ಅಹಿತಕರ ಹಾಗು ನೋವಿನ ಸಂಗತಿ, ಇದನ್ನು ವೈದ್ಯಕೀಯ ವಿಜ್ಞಾನದಲ್ಲಿ "ಡಿಸ್‌ಮೆನೋರಿಯಾ" ಎಂದು ಕರೆಯಲಾಗುತ್ತದೆ. ಕೆಲವು ಸಂಶೋಧಕರು "ಡಿಸ್‌ಮೆನೋರಿಯಾ"ವನ್ನು ಸ್ಪಾಸ್‌ಮೋಡಿಕ್ ಡಿಸ್‌ಮೆನೋರಿಯಾ ಹಾಗು ಕನ್‌ಜೆಸ್ಟೀವ್ ಡಿಸ್‌ಮೆನೋರಿಯಾ ಎಂದು ವಿಂಗಡಿಸಿದ್ದಾರೆ.

ಸ್ಪಾಸ್‌ಮೋಡಿಕ್‌ನ ಲಕ್ಷಣಗಳೆಂದರೆ – ಸೆಳೆತ, ಕಿಬ್ಬೊಟ್ಟೆ ನೋವು, ವಾಕರಿಕೆ, ಮುಟ್ಟಿನ ಶುರುವಿನಲ್ಲಿ ನಡುಕ. ೧೫ರಿಂದ ೨೫ ವಯಸ್ಸಿನವರಗೆ ಇದು ತುಂಬ ಸಾಮಾನ್ಯ.

ಕನ್‌ಜೆಸ್ಟಿವ್ ಡಿಸ್‌ಮೆನೋರಿಯದ ಲಕ್ಷಣಗಳೆಂದರೆ ಸಣ್ಣಗೆ ಅಥವಾ ತೀವ್ರವಾದ ಹೊಟ್ಟೆನೋವು, ವಾಕರಿಕೆ, ಮಲಬದ್ಧತೆ, ಬೆನ್ನು ಹಾಗು ತಲೆನೋವು, ಸ್ತನಗಳಲ್ಲಿ ನೋವು, ಸಿಟ್ಟು, ಬಿಗುವು ನಿರುತ್ಸಾಹ, ಸುಸ್ತು. ರಕ್ತಸ್ರಾವ ಹೆಚ್ಚಾದಾಗ ನೋವು ಕಮ್ಮಿಯಾಗಬಹುದು. ಈ ರೀತಿಯ ತೊಂದರೆ ಮುಟ್ಟಿನ ಪ್ರಾರಂಭದಿಂದ ಹಿಡಿದು ಮುಟ್ಟು ನಿಲ್ಲುವವರೆಗೂ ಮುಂದುವರೆಯುವುದು. ಪ್ರತಿಸಾರಿಯೂ ಈ ತೊಂದರೆಗಳು ಹೆಚ್ಚಾಗಬಹುದು. ಮುಟ್ಟು ಶುರುವಾಗುವ ಸ್ವಲ್ಪ ಮುಂಚೆ ಈ ರೀತಿಯ ತೊಂದರೆಗಳು ಕಾಣಿಸಿಕೊಳ್ಳುತ್ತವೆ. ಕೆಲವು ಮಹಿಳೆಯರಿಗೆ ತೀವ್ರವಾಗಿರುತ್ತದೆ. ಸ್ವಲ್ಪ ಮಟ್ಟಿಗೆ ಪ್ರೋಜೆಸ್ಟಿರಾನ್ ಹಾರ್ಮೋನಿನ ಕೊರತೆ ಇದಕ್ಕೆ ಕಾರಣ.

ಮೇಲೆ ತಿಳಿಸಿದ ಎರಡು ರೀತಿಯ ತೊಂದರೆಗಳಿಗೂ ಹಾರ್ಮೋನಿನ ಏರಿಳಿತಗಳೇ ಕಾರಣ. ನಿರ್ಧಿಷ್ಟ ಪ್ರಮಾಣದ ಹಾರ್ಮೋನುಗಳನ್ನು ನೀಡುವುದರಿಂದ ಈ ತೊಂದರೆಯನ್ನು ನಿವಾರಿಸಬಹುದು. ಸ್ಪಾಸ್‌ಮೋಡಿಕ್ ಡಿಸ್‌ಮೆನೋರಿಯಾವು ಇಸ್ಟ್ರೋಜೆನ್ ಅಂಶ ಪ್ರೋಜೆಸ್ಟಿರಾನ್ ಅಂಶಕ್ಕಿಂತ ಕಮ್ಮಿಯಾಗುವುದರಿಂದ ಉಂಟಾಗುತ್ತದೆ. ಗರ್ಭಕೋಶದಲ್ಲಿ ಕಟ್ಟುವ ಲೋಳೆಯಂತಹ ಪೊರೆಯು ಪ್ರೋಸ್ಟಾಗ್ಲಾಂಡಿನಂತಹ ದ್ರವವನ್ನು ಉತ್ಪಾದಿಸುತ್ತದೆ. ಮುಟ್ಟು ಶುರುವಾಗುವ ಮೊದಲು ಪ್ರೋಸ್ಟಾಗ್ಲಾಂಡ್‌ನ ಉತ್ಪಾದನೆ

ಹೆಚ್ಚಾಗುತ್ತದೆ. ಈ ಹೆಚ್ಚಿನ ಅಂಶದ ಸಂಕುಚನ ದಿಂದ ನೋವುಂಟಾಗುತ್ತದೆ.

ಮುಟ್ಟಿಗೆ ಸಂಬಂಧಪಟ್ಟ ಇನ್ನೊಂದು ತೊಂದ ರೆಯೆಂದರೆ "ಅಮಿನೋರಿಯಾ". ಇದರ ಲಕ್ಷಣಗಳೆಂ ದರೆ ಸರಿಯಾಗಿ ಮುಟ್ಟಾಗದೆ ಇರುವುದು. ಇದಕ್ಕೆ ಕಾರಣಗಳು ಅನೇಕ. ಹಾರ್ಮೋನಿನ ಏರಿಳಿತ, ಗಡ್ಡೆ ಗಳು, ಖಿನ್ನತೆ. ಮೊದಲ ಬಾರಿಗೆ ಋತುಮತಿಯಾ ಗುವುದಕ್ಕೆ ಸಂಬಂಧಪಟ್ಟ ಭಾವನಾತ್ಮಕ ಅಂಶಗಳು, ಜನ ನಾಂಗಗಳ ದೋಷ ಇದಕ್ಕೆ ಕಾರಣ. ಡಿಸ್‌ಮೆನೋ ರಿಯಾ ತುಂಬಾ ಸಾಮಾನ್ಯವಾದ ಸಮಸ್ಯೆಯಾದರೂ, ಅಮಿನೋರಿಯಾ ಬಗ್ಗೆ ಹೆಚ್ಚು ಸಂಶೋಧನೆಗಳು ನಡೆ ದಿವೆ. ಇದಕ್ಕೆ ಹೆಚ್ಚು ಒತ್ತು ಸಿಕ್ಕಿದೆ.

ಮುಟ್ಟಿನ ತೊಂದರೆಗಳು ಪ್ರಾರಂಭದಿಂದ ಕೊನೆ ಯವರೆವಿಗೂ ಒಂದೇ ರೀತಿಯಲ್ಲಿರುವುದಿಲ್ಲ. ವ್ಯಾಯಾ ಮ ಹಾಗೂ ಪಥ್ಯದಿಂದ ತೊಂದರೆಯನ್ನು ನಿವಾರಿಸಿ ಕೊಳ್ಳಬಹುದು. ಮಾಮೂಲಿಯಾಗಿ ಯಾವ ಕೆಲಸವ ನ್ನಾದರು, ಕಷ್ಟಕರವಾದುದನ್ನು ಮಾಡಬಹುದು. ೧೯೬೫ರ ಒಂದು ಅಧ್ಯಯನದ ಪ್ರಕಾರ ೧೩೮ ಜನ ವ್ಯಾಯಾಮ ಮಾಡದ ವಿದ್ಯಾರ್ಥಿಗಳಲ್ಲಿ ೬೫ ಜನ ಈಜುಗಾರ್ತಿಯರು ತೀರಾ ಕಡಿಮೆ ಮುಟ್ಟಿನ ತೊಂ ದರೆ ಇದ್ದವರು.

ಈ ಸಮಸ್ಯೆಗಳನ್ನು ಇನ್ನಷ್ಟು ಕಡಿಮೆಗೊಳಿಸಿ ಕೊಳ್ಳಬಹುದು. ಕಾಫಿ ಕಮ್ಮಿ ಕುಡಿಯುವುದರಿಂದ, ಶುದ್ಧೀಕರಿಸಿದ ಆಹಾರವನ್ನು (ಸಕ್ಕರೆ, ಹಿಟ್ಟು) ಕಡಿ ಮೆಮಾಡುವುದರಿಂದ ಕೆಲವು ಮಹಿಳೆಯರಿಗೆ ನೋವು ಕಡಿಮೆಯಾಗಿದೆ. ಮುಟ್ಟು ಶುರುವಾಗುವ ಸ್ವಲ್ಪ ದಿನ ಗಳ ಮುಂಚಿನಿಂದ ವಿಟಮಿನ್ ಸಿ ಮಾತ್ರೆಗಳನ್ನು ತೆಗೆ ದುಕೊಳ್ಳುವುದರಿಂದ ಕೆಲವರಿಗೆ ಉಪಯೋಗವಾಗಿದೆ. ಚೆನ್ನಾಗಿ ಹಣ್ಣಾದ ಬಾಳೆಹಣ್ಣು, ಕಿತ್ತಳೆ ರಸ, (ಕಡಿ ಮೆಯಾದ ಪೊಟಾಶಿಯಂ ಅಂಶವನ್ನು ಹೆಚ್ಚಿಸುತ್ತವೆ) ಸೇವಿಸುವುದರಿಂದ ನೋವು ಕಮ್ಮಿಯಾಗುತ್ತದೆ.

ನೋವು ಈಗಾಗಲೆ ಬಂದಿದ್ದರೆ ನೋವು ನಿವಾ ರಕ ಮಾತ್ರೆ ತೆಗೆದುಕೊಳ್ಳುವುದರಿಂದ ನೋವು ಕಡಿ ಯಾಗುತ್ತದೆ. ಮನಸ್ಸನ್ನು ಉಲ್ಲಾಸವಾಗಿರಿಸಿಕೊ ಳ್ಳುವುದರಿಂದ, ಹೆಚ್ಚಿನ ನೋವು ಖಿನ್ನತೆಗಳಿದ್ದರೆ ಆ ಸಮಯದಲ್ಲಿ ಹೆಚ್ಚು ಉದ್ವಿಗ್ನತೆಯನ್ನುಂಟುಮಾಡುವ ಕೆಲಸಗಳನ್ನು ಕಡಿಮೆ ಮಾಡಿಕೊಳ್ಳುವುದರಿಂದ ನೋ ವನ್ನು ಕಡಿಮೆಗೊಳಿಸಬಹುದು.

ಮುಟ್ಟು ನಮ್ಮ ಬದುಕಿನ ದಿನಚರಿಯ ಒಂದು ಭಾಗ. ಅದರ ಬಗ್ಗೆ ಅಸಹನೆಗೊಂಡರೆ ಮತ್ತಷ್ಟು ಕಿರಿ ಕಿರಿಗೆ ಕಾರಣವಾಗುತ್ತದೆ. ಆದ್ದರಿಂದ ಮಾಮೂಲಿ ಯಾಗಿ ಸ್ವೀಕರಿಸುವುದರಿಂದ ಹಾಗು ಆದಷ್ಟು ಆರಾ ಮದಾಯಕವಾಗಿರುವುದರಿಂದ ಉಲ್ಲಾಸಕರವಾಗಿರ ಬಹುದು.

**ಸರಸ್ವತಿ ಡು.**

---

ಮಹಿಳಾ ಆರೋಗ್ಯಕ್ಕೆ ಸಂಬಂಧಪಟ್ಟಂತೆ ಶತಮಾನಗಳಿಂದ ಬೆಳೆದು ಬಂದ ಸ್ಥಳೀಯ ಔಷಧಿಗಳ ಜ್ಞಾನ ನಾಶಹೊಂದುತ್ತಿರುವುದರ ಜೊತೆಗೆ ಆಧುನಿಕ ಔಷಧಿಗಳು ಗ್ರಾಮೀಣ ಮಹಿಳೆಯರಿಗೆ ದಕ್ಕದೇ ಇರು ವುದು ವಾಸ್ತವಿಕ ಸಂಗತಿ. ಈ ಹಿನ್ನೆಲೆಯಲ್ಲಿ ಮಹಿಳೆಯರ ಆರೋಗ್ಯಕ್ಕೆ ಸಂಬಂಧಿಸಿದಂತೆ ಮಹಿಳಾ ಸಂಘಟನೆಗಳ ಕಾರ್ಯಾಗಾರವೊಂದು ಇತ್ತೀಚೆಗೆ ತಮಿಳುನಾಡಿನಲ್ಲಿ ನಡೆಯಿತು. ಭಾರತದಲ್ಲಿನ ಮಹಿಳೆ ಯರ ಆರೋಗ್ಯಕ್ಕೆ ಸಂಧಿಸಿದಂತೆ, ಪರ್ಯಾಯ ಔಷಧಿಗಳ ಬಗ್ಗೆ ಅಧ್ಯಯನ ನಡೆಸುವ ಹಾಗೂ ಅದಕ್ಕೆ ಪೂರ ಕವಾಗಿ ಕೆಲವು ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವ ಯೋಜನೆಯೊಂದು ಈ ಕಾರ್ಯಾಗಾರದಲ್ಲಿ ರೂಪು ಗೊಂಡಿತು.

ಭಾರತದಲ್ಲಿನ ಏಳು ಮಹಿಳಾ ಸಂಘಟನೆಗಳು ಈ ಯೋಜನೆಯಲ್ಲಿ ಮುಂಚೂಣಿಯಲ್ಲಿವೆ. ಮಹಿಳಾ ಆರೋಗ್ಯದತ್ತ ಕೆಲಸಮಾಡುವ ಸಾಧ್ಯತೆಯಿರುವ, ವೈದ್ಯರನ್ನು ಮಹಿಳಾ ಗುಂಪುಗಳನ್ನು ಸಂಶೋಧನಾಲ ಯಗಳನ್ನು ಭೇಟಿಯಾಗುವ ಅನುವಾದಗಳನ್ನು ಮಾಡಬಲ್ಲ ಹಾಗೂ ಮೂಲಿಕೆಗಳನ್ನು ಹಂಚುವ ಕೇಂದ್ರಗ ಳನ್ನು ತೆಗೆಯುವ ಆಸಕ್ತಿಯಿರುವ ಮ. ಸಂ. ಇವುಗಳೊದಿಗೆ ಭಾಗವಹಿಸಬಹುದು. ಇಂದಿರಾ ಬಾಲಚಂದ್ರ (ಬಾಟನಿಸ್ಟ್) ಡಾ। ಶ್ಯಾಮ ಕೆ. ನಾರಂಗ್‌ರಂತಹ ರಿಸೋರ್ಸ್ ವ್ಯಕ್ತಿಗಳನ್ನೊಳಗೊಂಡಿದ್ದು, ದೇಶದ ವಿವಿಧ ಮ. ಸಂ. ಗಳ ಮಹಿಳೆಯರು ವಿವಿಧ ಜವಾಬ್ದಾರಿಗಳನ್ನು ವಹಿಸಿಕೊಂಡಿದ್ದಾರೆ.

# "ಅಮ್ಮ, ನಿನಗೊಂದು ಕಿವಿಮಾತು"



ಓ! ನನ್ನ ಅಮ್ಮ ನಿನ್ನ ಮುಖದ ಸುಕ್ಕು,
ಸುಕ್ಕು ಹೇಳುತ್ತಿದೆ ಕಥೆಯ,
ಜೀವನದದುದ್ದಕ್ಕೂ ನೀ ಅನುಭವಿಸಿದ
ಮನೋ ವ್ಯಥೆಯ.
ಎಂದೂ ಧೈರ್ಯದ ದೃಷ್ಟಿ ಬೀರದ ನಿನ್ನೀ-
ಕಣ್ಣುಗಳು,
ಕಣ್ಣೀರು ಸುರಿಸಲೆಂದೆ ಉಳಿಸಿರುವ
ಕೊಳಗಳು.
ಹೆಮ್ಮೆಯು ಎದುರಾಡದ ನಿನ್ನ ತುಟಿ,
ನಾಲಿಗೆಗಳು'
ಮೌನವಾಗಿ ಎಲ್ಲ ಸಹಿಸುತ್ತಿರುವ ಸಾಕು-
ನಾಯಿಗಳು.
ಮಾಡಿ ಮಾಡಿ ದಣಿದ ನಿನ್ನೀ ಬಡಶರೀರ–
ಮಾತ್ರ,
ತರುತ್ತಿದೆ ನೆನಪ ಗಾಣ ಸುತ್ತುತ್ತಿರುವ ಮೂಕೆತ್ತಿನ
ಚಿತ್ರ.
ನಿನ್ನ ಹಣೆಯಲ್ಲಿ ಮೂಡಿರುವ ಈ
ಗೆರೆಗಳು,
ನಿನ್ನ ಸ್ಥಿತಿಗೆ ಮರುಗುತ್ತಿರುವ ಲಕ್ಷ್ಮಣ–
ರೇಖೆಗಳು.
ಬಾಗಿದೆ ಬೆನ್ನು ಅಪ್ಪನೆಂಬ ಪ್ರಾಣಿಯಿಂದ
ಏಟು ತಿಂದು ತಿಂದು,
ಅಮ್ಮ! ನೀನೇಕೆ ಸೆಟೆದು ನಿಲ್ಲಲಿಲ್ಲ ಒಮ್ಮೆಯೂ
ಬೆಂದು.
ಹೋಲಿಸುವರು ಎಲ್ಲ ನಿನ್ನ ದೇವಾನುದೇವತೆಗಳಿಗೆ
ಪ್ರೇಮ ಪುತ್ಥಳಿಗೆ,
ಒಬ್ಬರೂ ಗಮನಿಸರು ನಿನ್ನ ಒಳಮನದ ಬೇಗುದಿಯ,
ಗಳಿಗೆ.
ಅರಿತೆ ನಿನ್ನ ಮುಖ ಕನ್ನಡಿಯಲ್ಲಿ ನೂರು ಸಾವಿರಾರು-
ವರ್ಷಗಳಿಂದ ನೀ ಬಯಸುತ್ತಿರುವೆ ಏನೆಂದು
ಅತಿರಥ ಮಹಾಪುರುಷ ಸಭ್ಯನೆಂಬ ಗಂಡು–
ನಿನ್ನಿಂದ ಪಡೆಯುತ್ತಿರುವ ಏನೆಂದು.

ನಿನ್ನ ಹಣೆಯಲ್ಲಿ ದೇವರು ಬರೆದು ಕಳಿಸಲಿಲ್ಲ-
ಇಂಥ ಭಾಗ್ಯ,
ನಿನ್ನಿಂದಾಗಿ ನೀನೆ ಸೃಷ್ಟಿಸಿಕೊಂಡಿರುವೆ ಅಮ್ಮ-
ಈ ದುರ್ಭಾಗ್ಯ.
ಒಮ್ಮೆ ನಿನ್ನನ್ನು ನೀನೆ ನೋಡಿ ಪ್ರಶ್ನಿಸಿಕೊ–
ನನ್ನಮ್ಮ ನೀನಾರೆಂದು,
ಅಬಲೆ ಸಬಲೆಯಾಗಿ ಗೆಲ್ಲುವ ಶಕ್ತಿ ಚೈತನ್ಯ–
ನಿನ್ನಲ್ಲಿದೆಯೆಂದು.
ಓ! ನನ್ನ ಅಮ್ಮ ನಿನ್ನ ಜೀವನವೆ ನನಗೊಂದು–
ಸ್ಫೂರ್ತಿ,
ಈ ಸಮಾಜದ ಕತ್ತಲು ಕೊಚ್ಚೆಯಲ್ಲಿ ಎಚ್ಚರದಿಂದ
ಕಾಲಿಡಲು ಸಹಕರಿಸುವ ಜ್ಯೋತಿ.

ಹಸೀನಾ ಮುಲ್ಲ

# ಮುಖ್ಯಮಂತ್ರಿಯ ಹುಬ್ಬು

ಗಂಟಿಕ್ಕಿತು ಗಂಟಿಕ್ಕಿತು
ಮುಖ್ಯಮಂತ್ರಿಯ ಹುಬ್ಬು
ತನಗೆ ತನ್ನ ಸ್ಥಾನಕ್ಕೆ
ಈ ಹದಿಹರೆಯದ ಹುಡುಗಿ
ಮಾಡಿದಪಮಾನಕ್ಕೆ
ಗಂಟಿಕ್ಕಿತು ಗಂಟಿಕ್ಕಿತು
ಮುಖ್ಯಮಂತ್ರಿಯ ಹುಬ್ಬು.

ಹುಟ್ಟುಹಾಕುತ್ತ ಜಗಸುತ್ತಿ ಬಂದ
ಏಷ್ಯಾದ ಮೊದಲ ಹೆಣ್ಣಿಗೆ
ಪುಷ್ಪಗುಚ್ಛವ ಕೊಡಲೆಂದು ಬಂದ
ಮಹಾರಾಷ್ಟ್ರದ ಮುಖ್ಯಮಂತ್ರಿಯ
ಹಣೆಯಗಲ ಕುಗ್ಗಿ ಕಣ್ಣು ಕಿರಿದಾಗಿ
ದಟ್ಟೈಸಿದ ಹುಬ್ಬು ಬಿಗಿದುಕೊಂಡಿತು ಹಾಗೆ.

ಮುಖ್ಯಮಂತ್ರಿಯ ಪುಷ್ಪಗುಚ್ಛಕ್ಕೆ
ಈ ಉಜ್ವಲೆಯಾದರೂ
ಒಡ್ಡಿದಳೇಕೆ ಎಡಗೈ
ಗೊತ್ತಿಲ್ಲವೆ ಅವಳಿಗೆ
ಎಡದ ಅಪಾವಿತ್ರ್ಯತೆ
ಬೆಕ್ಕಸ ಬೆರಗಾಯಿತು
ಸೇರಿದ ಜನಸ್ತೋಮ.

ಉಜ್ವಲೆಯ ಎಡಗೈಗೆ ಮಾತ್ರ
ಈ ಜನರ ಅಚ್ಚರಿ ತಿಳಿಯಲೇ ಇಲ್ಲ.
ಹೀಗೆ ಹೀಗಲ್ಲವೆ
ಉಜ್ವಲೆ ಹುಟ್ಟುಹಾಕಿದ್ದು
ದೋಣಿ ಸರಿಪಡಿಸಿದ್ದು
ಎಲ್ಲ ಒಂಟಿಕೈಯಲ್ಲಿ,
ಎಡವೆನಿಸಿಕೊಂಡ ನನ್ನಿಂದ.
ಯಾವಾಗ ಯಾವಾಗ
ಆ ಕಡೆಯ ನನ್ನ ಪ್ರತಿರೂಪ
ಆ ಬಲಗೈ
ಸೌಟು ಬಿಟ್ಟಿತ್ತು, ಬಿಡಲಾಯಿತು ಹೇಳಿ ?

**ವಿಜಯಾ ದಬ್ಬೆ**

# ಮಾನುಷಿ

**ಮಹಿಳಾ ಪತ್ರಿಕೆಯಾದ ಮಾನುಷಿ ಮಹಿಳೆಯರ ನೈಜ ಸಮಸ್ಯೆಗಳಿಗೆ ಹಿಡಿದ ಕನ್ನಡಿಯಾಗಿದೆ. ಮಹಿಳಾ ಸಮಸ್ಯೆಗಳನ್ನು ದಾಖಲಿಸುವಲ್ಲಿ, ನೆಲೆ ಬೆಲೆಯನ್ನು ಕಂಡುಕೊಳ್ಳುವಲ್ಲಿ, ಸೈದ್ಧಾಂತಿಕ ರೂಪುರೇಷೆಯನ್ನು ನಿರ್ಮಿಸುವಲ್ಲಿ ಮಹತ್ತರ ಹೆಜ್ಜೆಯಾಗಿದೆ.**

ಶತಮಾನಗಳಿಂದ ಉಸಿರುಗಟ್ಟುವ ವಾತಾವರಣದಲ್ಲಿ ಬದುಕುತ್ತಿದ್ದ ಮಹಿಳೆಯ ಜೀವನದಲ್ಲಿ ಎಚ್ಚರದ ಬೆಳಕಿನ ಕಿರಣಗಳು ನಿಧಾನವಾಗಿ ತೂರಿ ಬರತೊಡಗಿದವು. ತನ್ನ ಸುತ್ತ ಚಾಚಿದ ಕದಂಬ ಬಾಹುಗಳ ಬಿಗಿ ಹಿಡಿತದ ಅರಿವು, ಜಾಗೃತಿ ಭಾರತದ ಸಾವಿರಾರು ಸ್ತ್ರೀಯರಲ್ಲಿ ಮೂಡತೊಡಗಿತು. ಅವರ ಹೃದಯದ ಆಂತರಿಕ ನೋವು, ನಲಿವು ತಹತಹಿಕೆಗಳು ಅಭಿವ್ಯಕ್ತಿಯನ್ನು ಕಂಡುಕೊಂಡಿದ್ದು ದೆಹಲಿಯಿಂದ ಪ್ರಕಟವಾಗುವ ಮಹಿಳಾ ಪತ್ರಿಕೆ ಮಾನುಷಿಯಲ್ಲಿ.

ಮಾನುಷಿಯ ಹುಟ್ಟು ನಮ್ಮ ದೇಶದ ೨ ಮಹತ್ತರ ಘಟನೆಗಳ ಹಿನ್ನೆಲೆಯಲ್ಲಿ ಮೂಡಿ ಬಂದಿತು. ಸ್ವಾತಂತ್ರ್ಯ ಸಂಗ್ರಾಮದ ನಂತರ ಮೂರು ದಶಕಗಳವರೆಗೆ ಮಹಿಳಾ ಸಮಸ್ಯೆಗಳ ಬಗ್ಗೆ ಆವರಿಸಿದ್ದ ನಿರ್ಲಿಪ್ತತೆ ಹಾಗೂ ತುರ್ತುಪರಿಸ್ಥಿತಿ. ನಾಗರಿಕ ಹಕ್ಕು ಭಾಧ್ಯತೆಯ ಪ್ರಶ್ನೆ, ಪ್ರಜಾಪ್ರಭುತ್ವ, ವ್ಯಕ್ತಿ ಸ್ವಾತಂತ್ರ್ಯ, ಪತ್ರಿಕಾ ಸ್ವಾತಂತ್ರ್ಯ ಹಲವಾರು ಪ್ರಗತಿಪರ ಚಟುವಟಿಕೆಗಳಿಗೆ ಹಾಗೂ ಹೊಸ ಪತ್ರಿಕೆಗಳ ಉದಯಕ್ಕೆ ಕುಮ್ಮಕ್ಕು ನೀಡಿದವು.

೧೯೭೭ರಲ್ಲಿ ಮಧು ಮತ್ತು ರೂತ್ ದೆಹಲಿ ವಿಶ್ವವಿದ್ಯಾನಿಲಯದಲ್ಲಿ ಒಂದು ಮಹಿಳಾ ವೇದಿಕೆಯನ್ನು ಪ್ರಾರಂಭಿಸಿದರು. ವಿದ್ಯಾರ್ಥಿನಿಯರು ಹಾಗೂ ಅಧ್ಯಾಪಕರನ್ನೊಳಗೊಂಡ ಈ ವೇದಿಕೆಯನ್ನು ಅಧಿಕಾರ್ ಎಂದು ಕರೆಯಲಾಯಿತು. ಈ ವೇದಿಕೆ ಹೆಚ್ಚು ದಿನ ಕೆಲಸ ಮಾಡಲಿಲ್ಲವಾದರೂ ಒಂದು ಪ್ರಮುಖ ಯೋಜನೆಯಾದ ಮಾನುಷಿಯ ಪ್ರಕಟನೆಗೆ ಕೈ ಹಾಕಿತು. ವ್ಯಾಪಾರೀ ಪತ್ರಿಕೆಗಳು ಯಾವುದೇ ಪ್ರಗತಿ ಪರ ಹೋರಾಟ ಅಥವಾ ಚಟುವಟಿಕೆಗಳನ್ನು ನಿರ್ಲಕ್ಷಿಸುತ್ತಿದ್ದವು ಅಥವಾ ಅವುಗಳನ್ನು ಕಾನೂನಿನ ಸಮಸ್ಯೆಗಳೆಂದು ಜನರ ಮುಂದಿಡಲಾಗುತ್ತಿತ್ತು. ಜೊತೆಗೆ ಮಹಿಳೆಯರ ಸಮಸ್ಯೆಗಳನ್ನು ಕ್ಷುಲ್ಲಕಗೊಳಿಸುವುದು, ವೈಭವೀಕರಿಸುವುದು, ಇಲ್ಲವೇ ನಿರ್ಲಕ್ಷಿಸುವುದು ಸರ್ವೇ ಸಾಮಾನ್ಯವಾಗಿತ್ತು. ಮಹಿಳೆಯರಿಗೆ ಅವರದೇ ಆದ ಒಂದು ಸಮೂಹ ಮಾಧ್ಯಮದ ಅಗತ್ಯ ತೀವ್ರವಾಗಿತ್ತು. ಮಹಿಳೆಯರ ಸಮಸ್ಯೆಗಳಿಗೆ ದನಿ ನೀಡುವುದು. ಹೋರಾಟಗಳ ಬಗ್ಗೆ ಸುದ್ದಿ ಸಂಗ್ರಹಿಸುವುದು, ಅವನ್ನು ವ್ಯವಸ್ಥಿತವಾಗಿ ಪ್ರಕಟಿಸುವುದು, ಮಹಿಳಾ ಸಂಘರ್ಷಗಳಿಗೆ ಈ ಮೂಲಕ ಬೆಂಬಲ ನೀಡುವುದು ಮುಂತಾದ ಉದ್ದೇಶಗಳು ಈ ವೇದಿಕೆಗಿದ್ದವು.

**ಮಾನುಷಿಯ ಧ್ಯೇಯೋದ್ದೇಶಗಳು :—**

೧) ಮಹಿಳೆಯರ ಅಭಿವ್ಯಕ್ತಿಗೆ ಸೂಕ್ತವಾದ ವೇದಿಕೆಯನ್ನೊದಗಿಸುವುದು.

೨) ಮಹಿಳಾ ಹೋರಾಟದ ಬಗ್ಗೆ ಒಂದು ಒಮ್ಮತ ನಿಲುವಿಗೆ ಪೂರಕವಾದ ಚರ್ಚೆಯನ್ನು ಪ್ರಾರಭಿಸುವುದು.

೩) ಮಾನುಷಿಯ ಮೂಲಕ ವಿವಿಧ ಮಹಿಳಾ ಸಂಘಸಂಸ್ಥೆಗಳ ಹಾಗೂ ಅವುಗಳ ಮಹಿಳಾ ಚಟುವಟಿಕೆಗಳ ನಡುವೆ ಸಂಪರ್ಕವೇರ್ಪಡಿಸುವುದು.

೪) ಸ್ತ್ರೀಯರಲ್ಲಿರುವ ನಿಷ್ಕ್ರಿಯತೆ ಹಾಗೂ ಪ್ರತ್ಯೇಕತೆಯನ್ನು ತೊಡೆದು ಹಾಕುವುದು.

೫) ಮಹಿಳೆಯರ ಐತಿಹಾಸಿಕ ಅನುಭವಗಳನ್ನು ಪುನರ್ ವ್ಯಾಖ್ಯಾನಿಸುವುದು.

೬) ಸ್ತ್ರೀಯರನ್ನು ವಿಕೃತಿಯಿಂದ ಚಿತ್ರಿಸುವ ಹಾಗೂ ಅವರ ಸಮಸ್ಯೆಯನ್ನು ಕ್ಷುಲ್ಲಕ ಗೊಳಿಸುತ್ತಿರುವ ವಾಣಿಜ್ಯ ಸಮೂಹ ಮಾಧ್ಯಮಗಳಿಗೆ ಪ್ರತಿಯಾಗಿ ನೈಜ ಚಿತ್ರಣವನ್ನು ನೀಡುವುದು.

೭) ಮಹಿಳೆಯರ ಬದುಕಿಗೆ ಸಂಬಂಧಪಟ್ಟ ಅಂಕಿ–ಅಂಶಗಳನ್ನು ಸಂಗ್ರಹಿಸುವುದು.

ಈ ಮೇಲಿನ ಉದ್ದೇಶಗಳನ್ನೊಳಗೊಂಡ ಮಾನುಷಿಯು ಹಿಂದಿ ಹಾಗೂ ಇಂಗ್ಲಿಷ್ ಎರಡೂ ಭಾಷೆಯಲ್ಲಿ ಪ್ರಕಟಣೆಯಾಗುತ್ತಿವೆ. ಮೂರು ತಿಂಗಳಿಗೊಮ್ಮೆ ಪ್ರಕಟವಾಗುವ ಮಾನುಷಿ ದೇಶದ ವಿವಿಧ ಭಾಗಗಳಲ್ಲಿನ ಮಹಿಳೆಯರ ಸ್ಥಿತಿಗತಿಗೆ ಸಂಬಂಧಪಟ್ಟ ವರದಿ, ವಿಷಯ ಅಂಕಿ — ಅಂಶಗಳ ಸಂಗ್ರಹಣೆಯೊಂದಿಗೆ ವಿವಿಧ ಮಹಿಳಾ ಸಂಘ ಸಂಸ್ಥೆಗಳ ಕಾರ್ಯ ಚಟುವಟಿಕೆಗಳಿಗೆ ಒಂದು ಸಂಪರ್ಕ ಮಾಧ್ಯಮವಾಗಿ ಕೆಲಸ ಮಾಡತೊಡಗಿತು. ವಿಭಿನ್ನ ಭಾಷೆ, ಪದ್ಧತಿಗಳಿರುವ ಭಾರತದಂತಹ ವೈವಿಧ್ಯಮಯ ದೇಶದಲ್ಲಿ ಮಾನುಷಿಯು ಈ ಪ್ರಯತ್ನ ಭಾರತದ ಮಹಿಳೆಯರ ಸಾಮೂಹಿಕ ನೋವು ನಲಿವುಗಳಿಗೆ ದನಿ ನೀಡುವಲ್ಲಿ ಮಹತ್ವದ ಹೆಜ್ಜೆಯಾಯಿತು. ಮಧ್ಯಮ ವರ್ಗ, ಬುಡಕಟ್ಟು ಜನಾಂಗದ, ವಿಭಿನ್ನ ಜಾತಿಯ ವಿವಿಧ ವರ್ಗದ ಸ್ತ್ರೀಯರ ಬದುಕಿನ ಬಗೆಗೆ ನೈಜ ಚಿತ್ರಣವನ್ನು ನೀಡುವಲ್ಲಿ ಮಾನುಷಿ ಪ್ರಮುಖವಾದ ಪಾತ್ರವನ್ನು ವಹಿಸುತ್ತಿದೆ.

ಯಾವುದೇ ಪಕ್ಷ, ಅಥವಾ ಸಂಸ್ಥೆಯ ಒಂದು ಭಾಗವಾಗದೇ ಸ್ವತಂತ್ರವಾದ ಅಸ್ತಿತ್ವವುಳ್ಳ ಪತ್ರಿಕೆಯನ್ನಾಗಿಸಬೇಕೆನ್ನುವುದು ಮಾನುಷಿಯ ಕಲವು ಸದಸ್ಯರ ಬಲವಾದ ಅಪೇಕ್ಷೆಯಾಗಿತ್ತು. ಪತ್ರಿಕೆಯ ಪ್ರಕಟಣೆಯನ್ನು ಜಾಹಿರಾತುಗಳನ್ನು ಅವಲಂಬಿಸಬೇಕಾಗಿತ್ತು. ಜಾಹಿರಾತುಗಳನ್ನು ಕೇಳುವಾಗಲೂ ಎಚ್ಚರಿಕೆಯಿಂದ ಸ್ತ್ರೀಯರನ್ನು ತಮ್ಮ ವಸ್ತುಗಳ ಮಾರಾಟಕ್ಕೆ ಬಳಸಿಕೊಳ್ಳದ ಜಾಹಿರಾತುಗಳನ್ನು ಆಯ್ಕೆ ಮಾಡಿಕೊಳ್ಳಬೇಕಾಗಿತ್ತು. ಪತ್ರಿಕೆಯ ಸ್ವತಂತ್ರ ಅಸ್ತಿತ್ವವನ್ನು ಉಳಿಸಿಕೊಳ್ಳಲು ಹಾಗೂ ಪತ್ರಿಕೆಗೆ ಬೇಕಾದ ಹಣಕಾಸನ್ನು ಜನರಿಂದ ಮುಖ್ಯವಾಗಿ ಓದುಗರಿಂದ ಸಂಗ್ರಹಿಸುವುದು ಮೂಲಭೂತವಾಗಿ ಒಂದು ರಾಜಕೀಯ ಕ್ರಿಯೆ ಎಂಬುದು ಸದಸ್ಯರ ನಂಬಿಕೆಯಾಗಿತ್ತು. ಸ್ಥಾಪಕರ ಮಾನುಷಿಯ ಬೆಳವಣಿಗೆಯ ಜವಾಬ್ದಾರಿ ಪ್ರತಿಯೊಬ್ಬ ಓದುಗರ ಹೆಗಲ ಮೇಲಿರುತ್ತಲ್ಲದೆ, ಪತ್ರಿಕೆಯ ಸ್ವತಂತ್ರ ಅಸ್ತಿತ್ವವನ್ನೂ ಕಾಯ್ದುಕೊಳ್ಳುವಲ್ಲಿ ಮಹತ್ವದ ಹೆಜ್ಜೆಯಾಯಿತು.

**ಪ್ರಸರಣೆ:** ೧೯೭೮ರಲ್ಲಿ ಪ್ರಾರಂಭವಾದ ಮಾನುಷಿಯು ಇದುವರೆಗೂ ತನ್ನ ಪ್ರಸರಣೆಗೆ ಯಾವುದೇ ವಾಣಿಜ್ಯ ಹಂಚಿಕೆಯ ವ್ಯವಸ್ಥೆಯನ್ನು ಅವಲಂಬಿಸಿಲ್ಲ. ಮಹಿಳಾ ಸಂಘ ಸಂಸ್ಥೆಗಳು, ರಾಜಕೀಯ ಹಾಗೂ ಸಾಮಾಜಿಕ ಕಾರ್ಯಕರ್ತರು, ಮಾನುಷಿಯ ಓದುಗರು ಹಾಗೂ ಹಿತೈಷಿಗಳು ಈ ಕಾರ್ಯವನ್ನು ಯಶಸ್ವಿಯಾಗಿ ನಿರ್ವಹಿಸುತ್ತಿದ್ದಾರೆ. ಪ್ರಕಟಣೆಗೊಳ್ಳುವ ಸರಾಸರಿ ಹತ್ತು ಭಾಗದಷ್ಟು ಪ್ರತಿಗಳು ಮಾತ್ರ ವಾಣಿಜ್ಯ ವ್ಯವಸ್ಥೆಯ ಮೂಲಕ ಹಂಚಿಕೆಯಾಗುತ್ತವೆ. ಮಾನುಷಿಯ ಹಿತೈಷಿಗಳಾದ ಮಹಿಳಾ ಪತ್ರಕರ್ತರು ಮಾನುಷಿಯ ಮೊದಲ ಸಂಚಿಕೆ ಪ್ರಕಟವಾದಾಗ ಮಾನುಷಿಯ ಬಗ್ಗೆ ವಿವಿಧ ಪತ್ರಿಕೆಗಳಲ್ಲಿ ಬರೆದರು. ಸ್ಥಳೀಯ ಪತ್ರಿಕೆಗಳು ವಿವಿಧ ಭಾಷೆಗಳಲ್ಲಿ ಮಾನುಷಿಯ ಬಗ್ಗೆ ವ್ಯಾಪಕವಾದ ಪ್ರಚಾರ ನೀಡಿದವು.

ದೇಶದಾದ್ಯಂತ ವಿವಿಧ ಪ್ರಗತಿ ಪರ ರಾಜಕೀಯ ಸಂಘ ಸಂಸ್ಥೆಯ ಮಹಿಳಾ ಹಾಗೂ ಪುರುಷ ಕಾರ್ಯಕರ್ತರು ಮಾನುಷಿಯನ್ನು ಹೆಚ್ಚು ಹೆಚ್ಚು ಓದುಗರಿಗೆ ತಲುಪಿಸುತ್ತಿದ್ದಾರೆ. ಇಂದು ಮಾನುಷಿ ಹಲವಾರು ಮಹಿಳಾ ಗುಂಪುಗಳ, ಹಾಗೂ ಪತ್ರಿಕೆಗಳ ಪ್ರಾರಂಭಕ್ಕೆ ಸ್ಫೂರ್ತಿದಾಯಕವಾಗಿದೆ. ಮಹಿಳೆಯರ ಮಧ್ಯೆ ಚರ್ಚೆಯನ್ನು ಏರ್ಪಡಿಸುವಲ್ಲಿ ಮಾನುಷಿ ಯಶಸ್ವಿಯಾದ ಪಾತ್ರವನ್ನು ನಿರ್ವಹಿಸುತ್ತದೆ.

ಓದುಗರ, ಹಿತೈಷಿಗಳ ಹಾಗೂ ಆಸಕ್ತರ ಈ ಪ್ರಯತ್ನದಿಂದಾಗಿ ಮಾನುಷಿ ಇಂದು ದೇಶದ ವಿವಿಧ ಮೂಲೆಗಳಲ್ಲಿ ವ್ಯಾಪಕವಾಗಿ ಪ್ರಚಲಿತವಾಗಿದೆ.

**ಸೃಜನಶೀಲತೆಗೆ ಪ್ರೋತ್ಸಾಹ:** ಮಾನುಷಿಯು ತಾನು ಪ್ರಕಟಿಸುವ ಲೇಖನಗಳಿಗೆ ವೃತ್ತಿ ಬರಹಗಾರರನ್ನು ಅವಲಂಬಿಸಿಲ್ಲ. ಮಾನುಷಿಯ ಓದುಗರೆ ಮಾನುಷಿಯ ಬರಹಗಾರರಾಗಿದ್ದಾರೆ. ಮಾನುಷಿಗೆ ಬರೆಯುತ್ತಿರುವ ಬಹಳಷ್ಟು ಬರಹಗಾರರು ಈ ಕ್ಷೇತ್ರದಲ್ಲಿ ಅನನುಭವಿಗಳು. ಅವರಲ್ಲಿ ಬೆರಳೆಣಿಕೆಯ ಬರಹ

ಗಾರರು ಪ್ರಖ್ಯಾತರಾದವರು. ಹಳ್ಳಿಗಾಡುಗಳಲ್ಲಿ ಹಾಗೂ ನಗರ ಪಟ್ಟಣಗಳಲ್ಲಿ ಮಹಿಳೆಯರನ್ನು ಸಂಘಟಿಸುವ ಅಥವಾ ಅದರಲ್ಲಿ ಭಾಗವಹಿಸುವವರ ವರದಿಗಳನ್ನು ಮಾನುಷಿಗಾಗಿ ಬರೆಯುತ್ತಾರೆ. ಸ್ಥಳೀಯ ಭಾಷೆಗಳಲ್ಲಿ ಕಳಿಸಲಾಗುವ ಬರಹಗಳನ್ನು ಅನುವಾದ ಮಾಡಿ ಪ್ರಕಟಿಸಲಾಗುತ್ತದೆ.

ಮಾನುಷಿಯ ಈ ಪ್ರಯತ್ನದಿಂದಾಗಿ ಬಹಳಷ್ಟು ಮಹಿಳೆಯರಿಗೆ ಬರೆಯುವುದರ ಮೂಲಕ ಅಭಿವ್ಯಕ್ತಿ ಕಂಡುಕೊಳ್ಳಲು ಸಾಧ್ಯವಾಗಿದೆ. ಮಹಿಳೆಯರ ಸೃಜನಶೀಲ ಅಭಿವ್ಯಕ್ತಿಗೆ ಮಾನುಷಿ ಒಂದು ಮಾಧ್ಯಮವಾಗಿದೆ. ಮಾನುಷಿ ಮಹಿಳೆಯರಿಗೆ ನೀಡುವ ಸಲಹೆ, ಸಹಕಾರ, ಸೂಚನೆ, ಪ್ರೋತ್ಸಾಹದಿಂದ ಮಹಿಳೆಯರು ಬರೆಯುವ ಕಲೆಯನ್ನು ರೂಢಿಸಿಕೊಂಡಿದ್ದಾರೆ. ಮಹಿಳೆಯರ ವಿಶಿಷ್ಟ ಸಮಸ್ಯೆಗಳಿಗೆ ಸಂಬಂಧಪಟ್ಟಂತೆ ಆಳವಾದ, ವಿಶ್ಲೇಷಣಾತ್ಮಕ ಅಧ್ಯಯನಗಳಿಗೆ ಮಾನುಷಿ ಪ್ರೋತ್ಸಾಹ ನೀಡುತ್ತಾ ಬಂದಿದೆ.

ಶತಮಾನಗಳಿಂದ ಶೋಷಿತ ವ್ಯವಸ್ಥೆಗೆ ಮೌನವಾಗಿ ತಲೆತಗ್ಗಿಸಿ ತನ್ನ ವ್ಯಕ್ತಿತ್ವವನ್ನು ಕಳೆದುಕೊಂಡ ಮಹಿಳೆಗೆ ಆತ್ಮವಿಶ್ವಾಸ, ಸ್ವಾಭಿಮಾನದ ಭರವಸೆ ನೀಡುತ್ತದೆ. ಆದರೆ ಮಾನುಷಿಯ ಈ ಪ್ರಯತ್ನ ಸಗಮವಾದ ಹಾದಿಯೇನಲ್ಲ. ತಂದೆ ತಾಯಂದಿರು ತಮ್ಮ ಹೆಣ್ಣು ಮಕ್ಕಳು ಮಾನುಷಿಯನ್ನು ಓದುವುದನ್ನು ನಿಷಿದ್ಧಿಸುವುದು, ಓದಿದರೆ ಅವರ ವಿದ್ಯಾಭ್ಯಾಸವನ್ನು ನಿಲ್ಲಿಸುತ್ತೇವೆಂದು ಬೆದರಿಸುವುದು, ಅವರ ಚಲನವಲನಗಳ ಮೇಲೆ ಸದಾ ಕಣ್ಣಿಟ್ಟಿರುವುದು, ಅಥವ ಮದುವೆ ಮಾಡಿಬಿಡುವುದು, ಮಾನುಷಿಯ ಸಂಪರ್ಕವೇರ್ಪಡದಂತೆಮಾಡುವುದು, ಬ್ಲಾಕ್‌ಮೇಲ್ ಮಾಡುವುದು ಮುಂತಾದವುಗಳನ್ನು ಎದುರಿಸಬೇಕಾಗಿರುವುದು ಅನಿವಾರ್ಯವಾಗಿದೆ.

ಮಾನುಷಿಯನ್ನು ಓದುವುದು, ಲೇಖನ, ವರದಿ, ಚಿತ್ರ ಮುಂತಾದವುಗಳನ್ನು ಬರೆಯುವುದರ ಜೊತೆಗೆ ಮಾನುಷಿಯ ಪ್ರತಿದಿನದ ಕೆಲಸಗಳಲ್ಲಿ ಅನೇಕ ಮಹಿಳೆಯರು ಭಾಗವಹಿಸುತ್ತಾರೆ. ಪ್ರೂಫ್ ನೋಡುವುದು, ಪ್ರಕಟವಾಗುವ ಲೇಖನ, ವರದಿ, ಕವನ ಮುಂತಾದವುಗಳ ಚರ್ಚೆಯಲ್ಲಿ ಭಾಗವಹಿಸುವುದು, ವಿಳಾಸಗಳನ್ನು ಬರೆಯುವುದು ಮುಂತಾದವುಗಳನ್ನು ಸ್ತ್ರೀಯರು ಸ್ವಯಂ ಇಚ್ಛೆಯಿಂದ ಮಾಡುತ್ತಾರೆ. ತಮ್ಮ ಬಿಡುವಿನ ಸಮಯದಲ್ಲಿ ಮಹಿಳೆಯರು ಮಾನುಷಿ ಆಫೀಸ್‌ಗೆ ಹೋಗಿ ಮಾನುಷಿಯ ಕೆಲಸಗಳನ್ನು ಮಾಡುತ್ತಾರೆ. ದೆಹಲಿಯಲ್ಲಿಲ್ಲದ ಇನ್ನಿತರ ಊರಿನ ಮಹಿಳೆಯರು ಕೆಲವು ಸಮಯ ಅಲ್ಲಿದ್ದು ನಿರ್ದಿಷ್ಟ ಜವಾಬ್ದಾರಿಗಳನ್ನು ವಹಿಸಿಕೊಂಡು ಮಾನುಷಿಯ ಬೆಳವಣಿಗೆಗೆ ಸಹಕಾರಿಯಾಗಿದ್ದಾರೆ. ಪತ್ರಿಕೆಯನ್ನು ನಿಯಮಿತ ಮತ್ತು ದಿನನಿತ್ಯದ ನಿರ್ದಿಷ್ಟ ಕೆಲಸಗಳನ್ನು ನಿರ್ವಹಿಸಲು ನೇಮಿಸಿಕೊಳ್ಳಲಾದ ಇಬ್ಬರು ಮಹಿಳೆಯರೊಂದಿಗೆ ವಿಶ್ವವಿದ್ಯಾನಿಲಯದಲ್ಲಿ ಕೆಲಸ ಮಾಡುವ ಮಧು ಮತ್ತು ರೂತ್ ಹಗಲು ರಾತ್ರಿ ಮಾನುಷಿಗಾಗಿ ಶ್ರಮಿಸುತ್ತಾರೆ. ಅಧಿಕಾರದ ಯಾವುದೇ ಏಣಿಶ್ರೇಣಿಗಳಿಲ್ಲದ ಮಹಿಳೆಯರಲ್ಲೂ ಸಮಾನತೆಯನ್ನು ಒಂದಾಗಿ ನಂಬಿರುವ ಮಾನುಷಿ ಬಳಗ ಎಲ್ಲ ವರ್ಗ, ಜಾತಿ, ಭಾಷೆಯ ಮಹಿಳೆಯರನ್ನು ಒಗ್ಗೂಡಿಸುವಲ್ಲಿ ಸ್ಫೂರ್ತಿದಾಯಕವಾಗಿದೆ. ಶತಮಾನಗಳಿಂದ ಹತ್ತಿಕ್ಕಿದ ಭಾವನೆಗಳಿಗೆ ದನಿ ನೀಡುವಲ್ಲಿ ಮಾನುಷಿ ಪ್ರೇರಕ ಶಕ್ತಿಯಾಗಿದೆ.

ರಾಜೇಶ್ವರಿ ಎಚ್. ಎಸ್.

---

**ಮುಂಜಾಗ್ರತೆ**

ತ್ರೇತದಲಿ
"ಸೀತೆ"
ಒಬ್ಬನನ್ನೇ
ನೆಚ್ಚಿ
ಕೊರಗಿ, ಸೊರಗಿ
ಸುಖ ಕಾಣದೆ
ಜೀವನವನ್ನು "ವ್ಯರ್ಥ"
ಮಾಡಿಕೊಂಡಿದ್ದನ್ನು
ಕೇಳಿದ
ದ್ವಾಪರದ "ದ್ರೌಪದಿ"
ಐವರನ್ನಲ್ಲದೆ
ಆರನೆಯವನನ್ನೂ
ಮುಂಗಡವಾಗಿ ಮನದಿ ಮೆಚ್ಚಿ
ಮುಂಜಾಗ್ರತೆ ವಹಿಸಿದ್ದಳೆ?!

ಶಕುಂತಲ
ಕಾಡುಗುಡಿ.

# ಕಳೆದು ಹೋಗಿದ್ದೇನೆ....!



ಅರ್ಥವಿಲ್ಲದ ರೀತಿ ರಿವಾಜುಗಳನೆಲ್ಲ ಚರ್ಚಿಸುತ್ತಾ
ಸ್ವತಂತ್ರ ಅಸ್ತಿತ್ವ ಪಡೆಯಲಾಗದೆ ಪರಿತಪಿಸುತ್ತಾ
ಇದ್ದದ್ದ ಬಿಡಲಾಗದೆ
ಇಲ್ಲದ್ದ ಪಡೆಯಲಾಗದೆ
ವ್ಯರ್ಥಗೊಂಡಲನವಲೋಕಿಸುತ್ತಾ
ನಡೆವ ನಾನು. ನಿಜಕ್ಕೂ ಕಳೆದುಹೋಗಿದ್ದೇನೆ....!

ಮನುಜ ಧರ್ಮವಿಹೀನತೆಯ ಜಾತಿ ಭೂತಕ್ಕೆ
ಬಾಳೆಲ್ಲ ಬಲಿಯಾಗುವುದ ಕಂಡೂ
ದನಿ ತೆಗೆಯಬೇಕೆಂದರೂ
ಹಾಡಲಾಗದ ಮೂಕಹಕ್ಕಿಯ ಅವ್ಯಕ್ತನಾದ
ವಾದ ನಾನು, ನಿಜಕ್ಕೂ ಕಳೆದುಹೋಗಿದ್ದೇನೆ....!

ಇರುಳೆಲ್ಲ ನಿತ್ಯ ಅಲೆಯುವ ಮನ
ಹಗಲಾದಂತೆ ಹೆಜ್ಜೆಗಳನ್ನೇಕೆ ಮರೆಯುತ್ತವೆ?
ಬಟ್ಟೆಗಳೇಕೆ ಬಣ್ಣ ಕಳಕೊಳ್ಳುತ್ತವೆ?
ಬೆಚ್ಚನೆಯ ಕನಸುಗಳೆಲ್ಲ ಜಾರಿಹೋಗುತ್ತವೇಕೆ?
ಇವುಗಳ ಮುಂದೆಲ್ಲ ನಾನು ನಿಜಕ್ಕೂ ಕಳೆದು
ಹೋಗಿದ್ದೇನೆ. ........!

ಈ ಕತ್ತಲೆಯ ಬಿಕ್ಕುಗಳಲ್ಲಿ
ರಚ್ಚೆನಾದಾರಿಗಳೆಡೆಯಲ್ಲಿ
ಬಾಹುಗಳ ಹೊರಚೆಲ್ಲಿ ಹುಡುಕುತ್ತಲೇ ಇದ್ದೇನೆ....!
ನನ್ನನ್ನು ನಾನು........ಹುಡುಕುತ್ತಲೇ ಇದ್ದೇನೆ........!

ದುರ್ಗಾಸುತೆ

# ಮೌನ ಮಾತಾದಾಗ

---

ಸ್ತ್ರೀಯರಲ್ಲಿ ಮೂಡುತ್ತಿರುವ ಜಾಗೃತಿ ಹಾಗೂ ಬದಲಾಗುತ್ತಿರುವ ಸಾಮಾಜಿಕ ಪರಿಸರ ದಿಂದಾಗಿ ಸ್ತ್ರೀಯರ ಸಮಸ್ಯೆಗಳನ್ನು ನೋಡುತ್ತಿರುವ ದೃಷ್ಟಿಕೋನಗಳು ಬದಲಾಗುತ್ತಿವೆಯಲ್ಲವೆ? ಇಂತಹ ಆಲೋಚನೆ, ವಿಚಾರಗಳು ಅಸ್ಪಷ್ಟವಾಗಿದ್ದು ವೈರುಧ್ಯಗಳಿಂದ ಕೂಡಿರಬಹುದು. ಮಹಿಳಾ ಶೋಷಣೆ, ಕೌಟುಂಬಿಕ ಜವಾಬ್ದಾರಿ, ವಿವಾಹ ಪದ್ಧತಿ, ವರದಕ್ಷಿಣೆ, ಅಸಮಾನವೇತನ ಮುಂತಾದ ವಿಷಯಗಳ ಸುತ್ತ ನಿಮ್ಮ ಸ್ವಂತ ವಿಚಾರಗಳನ್ನು ಹಾಗು ಅನುಭವಗಳನ್ನು ಪುಟ್ಟ ಲೇಖನದ ರೂಪದಲ್ಲಿ ಬರೆದ ಕಳಿಸಿದ ಲೇಖನಗಳಿಗೆಂದು "ಮೌನ ಮಾತಾದಾಗ" ಅಂಕಣವಿದೆ. ಪ್ರಕಟವಾದ ಲೇಖನಗಳಿಗೆ ಪ್ರತಿಕ್ರಿಯೆಗಳನ್ನು ಪ್ರಕಟಿಸಲಾಗುವುದು.

ಸಂ. ಮಂ.

---

## ಅಂತರ್ಜಾತಿ ವಿವಾಹ ಹಾಗೂ ಪ್ರೇಮವಿವಾಹ

ಅಂತರ್ಜಾತಿ ವಿವಾಹವೆಂದ ಕೂಡಲೇ ಸಂಪ್ರದಾಯಬದ್ಧ ಕುಟುಂಬಗಳ ಹಿರಿಯರು ಕೋಪಾವೇಶ ದಿಂದ ಕಿಡಿಕಿಡಿಯಾಗುತ್ತಾರೆ. ಜಾತಿ ಬಿಟ್ಟವರಿಗೆ ಛೀಮಾರಿ ಹಾಕಿ ಸಮಾಜದಿಂದ ಹೊರಗಟ್ಟಿ ಅವರಿಗೆ ಬದುಕಲೂ ಬಿಡದಂತಹ ಪರಿಸ್ಥಿತಿ ಇಂದಿಲ್ಲ ನಿಜ. ಜನರ ಮನೋಭಾವಗಳು ಬಹಳಷ್ಟು ಮಟ್ಟಿಗೆ ಬದಲಾಯಿಸಿದೆ. ಪ್ರತ್ಯೇಕವಾಗಿ ಅವರ ಪಾಡಿಗೆ ಅವರಿರಲಿ ಅವರ ಹಣೇಬರಹ" ಎನ್ನುವ ಮಟ್ಟದವರೆಗೆ ಬಂದಿದೆ.

ಈ ಅಂತರ್ಜಾತಿ ವಿವಾಹ ಹಾಗೂ ಪ್ರೇಮವಿವಾಹ ಎಂದ ಕೂಡಲೆ ನನ್ನ ಮನದಲ್ಲಿ ಮೂರು ಪ್ರಶ್ನೆಗಳೇಳುತ್ತವೆ. ಯಾವುವು ಅಂತೀರ? ಮೊದಲನೆಯದು, ನಮ್ಮ ಇಂದಿನ ಯುವ ಪೀಳಿಗೆ ಅಂತರ್ಜಾತಿ ವಿವಾಹ ಹಾಗೂ ಪ್ರೇಮವಿವಾಹದ ಬಗ್ಗೆ ಎಷ್ಟು ಆಳವಾಗಿ ಯೋಚಿಸುತ್ತಿದೆ? ಎರಡನೆಯದು, ಅಂತರ್ಜಾತಿ ವಿವಾಹ ಜಾತೀಯತೆಯ ಪೂರ್ಣ ನಿರ್ಮೂಲನೆ ಮಾಡಬಲ್ಲದೆ?
ಮೂರನೆಯದು ಅಂತರ್ಜಾತಿ ವಿವಾಹಗಳೆಲ್ಲವೂ ಪ್ರೇಮವಿವಾಹಗಳೇ???

ಹಾ! ಮೂರೂ ಪ್ರಶ್ನೆಗಳಿಗೆ ಉತ್ತರಗಳನ್ನು ಆದಷ್ಟು ಸಮರ್ಪಕ ರೀತಿಯಿಂದ ವಿಶ್ಲೇಷಿಸುವ.

ಮೊದಲು ಮೊದಲ ಪ್ರಶ್ನೆಗೆ ಬನ್ನಿ. ಅಂತರ್ಜಾತಿ ಪ್ರೇಮವಿವಾಹ ಹೇಳಬೇಕೆಂದರೆ ಒಂದು ಸಪುರವಿದ್ದಂತೆ. ಅದೃಷ್ಟವಿದ್ದಲ್ಲಿ ಇದರಲ್ಲಿ ಖಂಡಿತ ಜಯ. ಇಲ್ಲದಿದ್ದರೆ ಈ ರೀತಿಯ ವಿವಾಹಗಳು ತಂದುಕೊಡುವ ಪಾಡು ನಾಯಿಪಾಡು. ಪ್ರೇಮಸುಮ ಮುಡಿಯೇರಿ ಕುಳಿತರೆ ಬಹಳ ನಲಿವು. ಕೈಮೀರಿ ಮುಡಿಯಿಂದ ಜಾರಿ ಕೆಳಬಿದ್ದರೆ ಬರೀ ನೋವು. ನಮ್ಮ ಯುವ ಪೀಳಿಗೆ ಈ ರೀತಿಯ ವಿವಾಹ ಎಂದರೆ ಅಂತರ್ಜಾತಿ ವಿವಾಹದ ಬಗ್ಗೆ ಸರಿಯಾಗಿ ಆಳವಾಗಿ ಯೋಚಿಸುತ್ತಿದೆಯೆ? ಬಹುಮಟ್ಟಿಗೆ ಇಲ್ಲವೆಂದೇ ಹೇಳಬೇಕು. ಏಕೆಂದರೆ ಈ ತರದ ವಿವಾಹಗಳಲ್ಲಿ ನಾವು ಈ ದಿನ ಹೆಚ್ಚು ಸೋಲುಗಳನ್ನೇ ಕಾಣುತ್ತಿದ್ದೇವೆ,

ಬೇರೆ ಜಾತಿಯ ಮದುವೆಗೆ ಎರಡೂ ಕುಟುಂಬದವರು ಪರಸ್ಪರ ಒಪ್ಪಿಗೆ ನೀಡದಿದ್ದಲ್ಲಿ ಎಲ್ಲರನೂ ಎದುರಿಸಿ, ತಮ್ಮವರನ್ನೆಲ್ಲ ತೊರೆದು ಒಂದಾಗುವ ಜೋಡಿಹಕ್ಕಿಗಳು ಮದುವೆಯಾದ ಹೊಸದರಲ್ಲಿ ಪ್ರಪಂಚದ ಸಮಸ್ತವನ್ನೂ ತಮ್ಮಿಬ್ಬರ ನಡುವಿನ ಪ್ರೇಮದಲ್ಲೇ ಕಾಣಬಯಸುತ್ತಾರೆ. ಬೆಸೆದು ನಿಂತ ಮರಬಳ್ಳಿಗಳಂತೆ ಒಬ್ಬರಿಗೊಬ್ಬರು ಆಸರೆಯಾಗಿರುತ್ತಾರೆ. ಉತ್ಸಾಹ, ಚೈತನ್ಯ, ಸಂತಸಗಳ ಚಿಲುಮೆಯಾಗುತ್ತಾರೆ.

ಮುಖ್ಯ ವಿಷಯ, ಆದರೆ ಇದು ಎಲ್ಲಿಯತನಕ ಎಂಬುದು. ಮಿಲನದ ಹೊಸದರಲ್ಲಿ ಇರುವ ಹುರುಪು ಉತ್ಸಾಹ ದಿನಗಳೆದಂತೆ ಕುಗ್ಗುತ್ತ ಹೋಗಿ

ಗಂಡಹೆಂಡತಿಯ ಮಧ್ಯೆ ಮೂರೇ ತಿಂಗಳಿಗೆ ಭಿನ್ನಾಭಿಪ್ರಾಯ ಮನಸ್ತಾಪ ಕಲಹಗಳೇರ್ಪಟ್ಟು ಹೊಂದಾಣಿಕೆಯೇ ಇಲ್ಲದೆ, ಅದು ವಿವಾಹ ವಿಚ್ಛೇದನದ ಮಟ್ಟದವರೆಗೂ ಬಂದು ಆ ಜೋಡಿ ಒಬ್ಬರನ್ನೊಬ್ಬರು ತೊರೆದು ದೂರವಾದರೆ ಏನು ಪ್ರಯೋಜನ? "ಏನು ಅಂತರ್ಜಾತಿ ವಿವಾಹಗಳೆಲ್ಲವೂ ಹೀಗೆ ಆಗುತ್ತದೆಯೆ?" – ಎನ್ನುತ್ತೀರ? ಖಂಡಿತ ಎಲ್ಲವೂ ಅಲ್ಲ. ಆ ವಿವಾಹದ ಬಂಧ ಜನ್ಮ ಜನ್ಮದ ಅನುಬಂಧವಾಗಿ ಆ ಜೋಡಿ ಮಾನಸಿಕ ಸಂಬಂಧದ ಮೌಲ್ಯಗಳನ್ನರಿಯಬೇಕು. ತಮ್ಮನ್ನು ಕೆಣಕಿ ವ್ಯಂಗ್ಯವಾಡುವ ಜನರಿಗೆ ಕಿವಿಕೊಡದೆ ಸಂಯಮ ಸದ್ಗುಣಗಳ ಸಾಕಾರ ಮೂರ್ತಿಗಳಾಗಬೇಕು, ಜಯ ಕಾಣಬೇಕು, ಇಲ್ಲದಿದ್ದರೆ ತನ್ನವರೆಲ್ಲರನ್ನೂ ದೂರ ಮಾಡಿ ಹೆತ್ತೊಡಲುಗಳ ಉರಿಸಬೇಕೆ "ವಿವಾಹ ವಿಚ್ಛೇದನ" ದ ಮಹಾಕಾರ್ಯಕ್ಕೆ? ಆಗಲೇ ಹೇಳಿದಂತೆ ಈ ಅಂತರ್ಜಾತಿ ವಿವಾಹದ ಸಾಗರದಲ್ಲಿ ಈಸಬೇಕು, ಜಯಿಸಬೇಕು ಎಂದರೆ ಅದೃಷ್ಟದ ಜೊತೆಗೆ ಸಂಯಮ, ಅನ್ಯೋನ್ಯತೆ, ದೈಹಿಕಾಕರ್ಷಣೆಗಿಂತ ಮಿಗಿಲಾಗಿ ಮಾನಸಿಕವಾಗಿ ಒಬ್ಬರನ್ನೊಬ್ಬರು ಅರಿಯುವುದು ಬಹಳ ಅವಶ್ಯಕವೆಂಬುವುದರತ್ತ ನಮ್ಮ ಯುವಕ ಯುವತಿಯರಿಗೆ ಅರಿವು ಮೂಡಬೇಕು.

ಎರಡನೆಯ ಪ್ರಶ್ನೆ ಅಂತರ್ಜಾತಿ ವಿವಾಹ ಜಾತೀಯತೆಯ ಪೂರ್ಣ ನಿರ್ಮೂಲನೆ ಮಾಡಬಲ್ಲದೆ? ಖಂಡಿತ ಇಲ್ಲ. ಇದು ಸ್ವಲ್ಪ ಸಹಾಯಕಾರಿಯಾಗಬಲ್ಲದೆ ವಿನಃ ಪೂರ್ಣವಾಗಿ ಎಂದರೆ ಅದು ಶುದ್ಧ ಸುಳ್ಳು. ಉದಾಹರಣೆಗೆ ಒಬ್ಬ ಬ್ರಾಹ್ಮಣ ಹುಡುಗಿ ಬೆಸ್ತರ ಹುಡುಗನನ್ನು ಮದುವೆಯಾದರೆ ಆಕೆ ಆ ಬೆಸ್ತರ ಜಾತಿಗೇ ಬೆರೆತು ಹೋಗುತ್ತಾಳೆ. ಮೇಲಾಗಿ ನಮ್ಮದು ಹೆಸರಿಗಷ್ಟೇ ಜಾತ್ಯಾತೀತ ರಾಷ್ಟ್ರ. ಹೆಚ್ಚೆಚ್ಚು ಜಾತಿ ಪಂಗಡಗಳು, ಮತಗಳು, ಜಾತೀಯತೆಯ ಕಲಹಗಳು ಇಲ್ಲೇ ತಾಂಡವವಾಡುತ್ತಿರುವುದು. ಅಂತರ್ಜಾತಿ ವಿವಾಹದ ದಂಪತಿಗಳಿಗೆ ಜನಿಸಿದ ಒಂದು ಮಗುವನ್ನು ಶಾಲೆಗೆ ಸೇರಿಸಬೇಕಾದರೆ "ಯಾವ ಜಾತಿ?" ಎಂದು ಪ್ರಶ್ನಿಸುತ್ತಾರೆ. ಆಗ ಆ ದಂಪತಿಗಳು "ಮನುಷ್ಯ ಜಾತಿ" ಎನ್ನುವರೆ? ಹಾಗೆನ್ನಲು ಸಾಧ್ಯವೆ? ಜಾತೀಯತೆ ಅಂತರ್ಜಾತಿ ವಿವಾಹದಿಂದಲೇ ನಾಶ ಎಂಬುದು ಸಂಪೂರ್ಣ ಕನಸು. ಪೂರ್ಣ ನಿರ್ಮೂಲನೆಗೆ ಇನ್ನೂ ಹೆಚ್ಚು ಕಾಲಾವಕಾಶ ಬೇಕು. ಜೊತೆಗೆ ಮನುಷ್ಯ ವಿದ್ಯಾವಂತನಾಗಬೇಕು. ಎಲ್ಲರಲ್ಲೂ ಆತ್ಮೀಯತೆಯಿಂದ ಬೆರೆತು, ಇದು ನನ್ನ ದೇಶ. ಇಲ್ಲಿರುವ ಎಲ್ಲರೂ ನನ್ನವರು. ಅವರೆಲ್ಲರ ಕಷ್ಟಸುಖ ನನ್ನದು, ನನ್ನ ಕಷ್ಟಸುಖ ಅವರದು ಎಂಬ ವಿಶಾಲ ಮನೋಭಾವನೆಗಳನ್ನು ಬೆಳೆಸಿಕೊಳ್ಳಬೇಕು. ಕೀಳು ವಿಚಾರಗಳು, ಮೂಢ ನಂಬಿಕೆಗಳು ತೊಲಗಬೇಕು. ನಾನು, ನನ್ನದು ಎಂದು ಬೀಗದೆ, ಸಮಸ್ತರನ್ನೂ ಪ್ರೀತಿ ವಿಶ್ವಾಸದಿಂದ ಕಾಣಬೇಕು. ಬೇರೆಯವರನ್ನು ತಾತ್ಸಾರದಿಂದ ಹೀಗಳೆದು ಮನಸ್ಸಿಗೆ ನೋವು ತರಬಾರದು. ಎಲ್ಲರೂ ಸಮಾನರೆಂದು ಗೌರವಿಸಿದಾಗ ಜಾತಿ, ಮತ ಎಂಬ ಹುಚ್ಚು ಕೂಗಾಟ ನಿಲ್ಲುತ್ತದೆ. ಆಗ ಪ್ರತಿಯೊಬ್ಬನೂ ಜಾತೀಯತೆಯ ಚೌಕಟ್ಟಿನಿಂದ ಹೊರಬಂದು ಎಲ್ಲ ಜೀವಿಗಳನ್ನೂ ನಿರ್ಮಲ ಪ್ರೀತಿಯಿಂದ ಕಂಡು ಗೌರವಿಸುತ್ತಾನೆ. ಆಗ ಮೇಲು – ಕೀಳು ಎಂಬ ಭಾವನೆ ಬರಲಸಾಧ್ಯ.

ಕಡೆಯ ಹಾಗೂ ಮೂರನೇ ಪ್ರಶ್ನೆಗೆ ಬರೋಣವೇ? "ಇನ್ನೂ ಮುಗೀಲಿಲ್ಲವೆ? ಎನ್ನುತ್ತೀರ ಓದುಗರೆ? ಸ್ವಲ್ಪ ನಿಧಾನಿಸಿ. ಈ ಪ್ರಶ್ನೆ ಬಹಳ ಮುಖ್ಯ ಹಾಗೂ ಕುತೂಹಲವಾಗಿದೆ ಕೂಡ.

"ಅಂತರ್ಜಾತಿ ವಿವಾಹಗಳೆಲ್ಲವೂ ಪ್ರೇಮವಿವಾಹಗಳೆ??? ಪ್ರೇಮವಿವಾಹ ಬೇರೆ ಜಾತಿಗಳ ಒಂದು ಹೆಣ್ಣುಗಂಡಿನ ನಡುವೆಯೇ ಆಗಬೇಕೆಂಬುದೇನಿಲ್ಲ ಒಂದೇ ಜಾತಿಯ ನಡುವೆಯೂ ಆಗಿರಬಹುದು. ಪ್ರೇಮವಿವಾಹವೆಂದರೆ ಸುಮ್ಮನೆ ಎಲ್ಲೋ ಒಬ್ಬರನ್ನೊಬ್ಬರು ಆಕಸ್ಮಿಕ ಭೇಟಿಯಲ್ಲಿ ಕಂಡ ಮಾತ್ರಕ್ಕೆ ಅಥವಾ ರೂಪಕ್ಕೋ, ಹಣ ಅಂತಸ್ತಿಗೋ ಸೋತು, ಯೌವನದ ಮತ್ತಲ್ಲಿ ನಡೆದುಹೋದ ವಿವಾಹ ಕೇವಲ ದೈಹಿಕಾಕರ್ಷಣೆಯ ದುಡುಕು ವಿವಾಹವಾಗುತ್ತದೆಯೇ ವಿನಃ ಪ್ರೇಮವಿವಾಹ ಎನಿಸದು.

ಪ್ರೇಮವಿವಾಹದಲ್ಲಿ ಒಬ್ಬರ ಮನಸ್ಸನ್ನು ಒಬ್ಬರು ಚೆನ್ನಾಗಿ ಅರಿತಿರಬೇಕು. ಪ್ರೇಮ ಹಕ್ಕಿಗಳ ಮನಸ್ಸುಗಳು ತಿಳಿನೀರಿನಂತೆ ಶುಭ್ರವಾಗಿ ಸಾಗರದಂತೆ ವಿಶಾಲವಾಗಿ, ನಕ್ಷತ್ರದಂತೆ ಹೊಳಪಾಗಿರಬೇಕು. ಆ ಎರಡು ಹೃದಯಗಳು ಪರಸ್ಪರ ನೋವು ನಲಿವುಗಳಿಗೆ

ಸ್ಪಂದಿಸಬೇಕು. ಬಿಡಿಸಲಾರದ ಬಂಧನವಾಗಿ ಬೆಸೆದುಕೊಂಡು ಮಾನಸಿಕ ಸಂಬಂಧ ಹೆಚ್ಚು ಅರ್ಥಪೂರ್ಣವಾಗಿರಬೇಕು. ಸಾಯುವವರೆಗೆ ಅನ್ಯೋನ್ಯತೆ, ಪ್ರೀತಿ, ಸದ್ಗುಣ, ತಾಳ್ಮೆ ನಗುನಗುತಿರಬೇಕು. ಪ್ರೇಮಿಗಳು ಅಮರರಲ್ಲ, ಆದರೆ ಅವರ ನಿಜ ನಿರ್ಮಲ ಪ್ರೇಮ ಅಮರ. ಆ ಪ್ರೇಮಪೂಜೆ ಈ ಯಾಂತ್ರಿಕ, ಸ್ವಾರ್ಥ, ಹಣದ ಪ್ರಪಂಚಕ್ಕೆ ಹೊರತಾದ್ದು, ಅದಕ್ಕೆ ಬೆಲೆಕಟ್ಟಲಾಗದು. ನಿಜ ಪ್ರೇಮ ಹಾಗೂ ತ್ಯಾಗ ಪ್ರೇಮಿಗಳ ಉಸಿರು. ಇಂಥಹ ಪ್ರೇಮಿಗಳ ಮಿಲನವೇ ಪ್ರೇಮವಿವಾಹ,

ಆದರೆ ಅಂತರ್ಜಾತಿ ವಿವಾಹಗಳೆಲ್ಲವೂ ಮೇಲೆ ಹೇಳಿದಂಥ ಪ್ರೇಮವಿವಾಹಗಳೆ? ಖಂಡಿತವಾಗಿಯೂ ಇಲ್ಲ.

ಕೆಲವೊಮ್ಮೆ ಜೋಡಿಹಕ್ಕಿಗಳು ಕ್ಷಣಿಕ ಭೋಗಕ್ಕೆ ಮರುಳಾಗುತ್ತಾರೆ. ವಾಸ್ತವಿಕ ಪ್ರಜ್ಞೆಯಿಲ್ಲದೆ ವರ್ತಿಸುತ್ತಾರೆ. ಹೋಟೆಲ್ಲುಗಳಲ್ಲಿ ತಿನ್ನುತ್ತ ಸಿನೆಮಾ ನೋಡುತ್ತ ಮನಸ್ಸಿಗೆ ಬೇಕಾದ ಕಡೆ ಜೊತೆಯಾಗಿ ಓಡಾಡುತ್ತ ಪಾರ್ಕುಗಳಲ್ಲಿ ಸುತ್ತಾಡುತ್ತ ಜಾಲಿಯಾಗಿರುವುದೇ ನಮ್ಮ ಈ ಯೌವನದ ಸಾರ್ಥಕತೆ ಎಂಬ ಮನೋಭಾವದಲ್ಲಿ ಮೈ ಮರೆಯುತ್ತಾರೆ. ಬಣ್ಣದ ಲೋಕದಲ್ಲಿ ಬಣ್ಣದ ಪ್ರೀತಿ ಮಾತುಗಳಲ್ಲಿ ಹುಸಿ ಪ್ರೇಮ ವಂಚಕ ಬಲೆಗೆ ಬಿದ್ದು ಜೀವನವನ್ನು ಮಣ್ಣಲ್ಲಿ ಮಣ್ಣಾಗಿಸುತ್ತಾರೆ. ಜಗದಲ್ಲಿ ಯಾರೂ, ಯಾವುದೂ ಕಣ್ಣಿಗೆ ಬೀಳುವುದಿಲ್ಲ. ಗಂಡೇ ಹೆಣ್ಣಿಗೆ ಮೋಸ ಮಾಡಬೇಕೆಂದಿಲ್ಲ. ಹೆಣ್ಣೇ ಮಾಡಲೂಬಹುದು. ಆದರೆ ಇಲ್ಲಿ ನಾನು ಹೇಳುವ ಚಿಕ್ಕ ಉದಾಹರಣೆ ಕಣ್ಣಾರೆ ಕಂಡ ಒಂದು ಹೆಣ್ಣಿನ ಹೃದಯ ವಿದ್ರಾವಕ ಕಥೆ.

ನನ್ನ ಪರಿಚಯಸ್ಥ ಹುಡುಗಿಯೊಬ್ಬಳು ಅಂತರ್ಜಾತಿ ಮದುವೆ ಮಾಡಿಕೊಂಡಳು. ಅವಳದು ಸಂಪ್ರದಾಯ ಬದ್ಧ ಕುಟುಂಬ. ಹುಡುಗ ವ್ಯಾಪಾರಸ್ಥ. ಇಬ್ಬರದೂ ಒಂದೇ ಊರು. ಈ ಮದುವೆಗೆ ಇಬ್ಬರ ಮನೆಗಳಲ್ಲೂ ಒಪ್ಪಲಿಲ್ಲ. ಆ ಹುಡುಗಿಯ ತಾಯಿ ಮಗಳಿಗೆ ತಿಳಿಸಿ ಬುದ್ಧಿ ಹೇಳಿದಳು. ಮಗಳು ಬಗ್ಗಲಿಲ್ಲ. ಸರಿ ತಂದೆ ಹೊಡೆದರು, ಬಡಿದರು, ಬೆದರಿಸಿದರು. ಇದೆಲ್ಲ ಪ್ರಯೋಜನಕಾರಿಯಾಗಲಿಲ್ಲ.

ಮರೆತೆ, ಮುಖ್ಯ ಸಂಗತಿ ಎಂದರೆ ಹುಡುಗಿ ರೂಪಸ್ಥೆ. ತನ್ನ ಹುಡುಗನ ಪ್ರೀತಿಯನ್ನು ನಂಬಿದಳು. ಪ್ರಪಂಚದ ಮೋಸ ಅರಿಯದವಳು. ಒಂದು ದಿನ ಇಬ್ಬರೂ ಮನೆಬಿಟ್ಟು ಹೋಗಿ ದೇವರ ಮುಂದೆ ಸರಳವಾಗಿ ಮದುವೆಯಾಗಿ ರಿಜಿಸ್ಟ್ರಾರ್ ಆಫೀಸಿನಲ್ಲಿ ರಿಜಿಸ್ಟರ್ಡ್ ಮದುವೆಯಾಗದೆ ಸಂಸಾರ ಹೂಡಿದರು. ದೇವರ ಸಾಕ್ಷಿಯ ಜೊತೆಗೆ ಇಬ್ಬರಿಗೂ ಮನಸ್ಸಾಕ್ಷಿ ಬಹು ಮುಖ್ಯ ಅಲ್ಲವೆ? ಅದಿಲ್ಲದಿದ್ದರೆ ಎಲ್ಲ ಎಡವಟ್ಟು.

ತನ್ನವರೆನ್ನೆಲ್ಲ ತೊರೆದು, ಹೊಡೆತ ಬಡಿತಕ್ಕೆ ಬಗ್ಗದೆ, ಸಮಾಜಕ್ಕೆ ಹೆದರದೆ, ಎಲ್ಲವನ್ನೂ, ಎಲ್ಲರನ್ನೂ ತನ್ನವನಲ್ಲಿ ಕಾಣಬಯಸಿದ ಈ ಅಮಾಯಕ ಹುಡುಗಿಗೆ ಆ ಮಹಾನುಭಾವನಿಂದ ದೊರೆತ ಉಡುಗೊರೆ ಏನು ಗೊತ್ತೆ?

ಸಮಾಜದ ಕ್ರೂರ ದೃಷ್ಟಿಗೆ ಬಲಿಯಾಗುತ್ತ ಏಕಾಂಗಿಯಾಗಿ ಗೋಮುಖ ವ್ಯಾಘ್ರಗಳನ್ನು ಎದುರಿಸುತ್ತ ಕೂಲಿನಾಲಿ ಮಾಡುತ್ತ ಜೀವಂತ ಶವದಂತೆ ನಡೆಸುತ್ತಿರುವ ಬದುಕು. ಮದುವೆಯಾದ ೨ ತಿಂಗಳಿಗೆಲ್ಲ ಈ ಹೆಣ್ಣಿನ ಬದುಕು ಈ ರೀತಿ ದುರವಸ್ಥೆಗಿಳಿಯಿತು. ತಾಳಿ ಕಟ್ಟಿದ ಪುಣ್ಯಾತ್ಮ ಊಟ ಮಾಡಿದ ಮೇಲೆ ಎಸೆವ ಬಾಳೆಯೆಲೆಯಂತೆ ಈ ಹೆಣ್ಣನ್ನು ಕಷ್ಟಗಳ ಕೋಟಲೆಯೊಳಗೆಸೆದು ಹಾಯಾಗಿ ಏನೂ ನಡೆದೇ ಇಲ್ಲವೆಂಬಂತೆ ತಲೆಬೀಸುತ್ತ ಆರಾಮವಾಗಿದ್ದಾನೆ. ಆದರೆ ಆ ಹೆಣ್ಣು? ಇವನ ಪ್ರೇಮದ ಮುಖವಾಡ ಧರಿಸಿದ ಕಾಮದ ನಿಜರೂಪಕ್ಕೆ ಆ ಹುಡುಗಿಯ ಬಾಳು ಬರಡಾಯಿತು, ಬಲಿಯಾಯಿತು. "ಹೆಣ್ಣಿನ ಬಾಳು ಹಣ್ಣಿನ ಹೋಳು, ಜಾರಿದರೊಮ್ಮೆ ಮಣ್ಣಿನ ಧೂಳು." ಎಷ್ಟು ಅರ್ಥಗರ್ಭಿತವಾಗಿದೆಯಲ್ಲವೆ?

ಹೆಣ್ಣು ಯೌವನಾವಸ್ಥೆಗೆ ಬಂದಾಗ ಅಮಾಕತೆಯ ಮುಗ್ಧ ಪ್ರಪಂಚದಿಂದ ಹೊರಬಂದು ಒಳಿತು–ಕೆಡಕುಗಳನ್ನು ಅರಿಯಬೇಕು. ಮತಿವಂತಳಾಗಿ, ವಿದ್ಯಾವಂತಳಾಗಿ, ಚಂಚಲ ಮನಸ್ಸನ್ನು ಹತ್ತಿಕ್ಕುತ್ತ ಪರಿ

ಯಗೊಡದೆ, ವಾಸ್ತವಿಕತೆಯ ಪ್ರಜ್ಞೆಯನ್ನು ಕಳೆದುಕೊಳ್ಳದೆ, ಇಂತಹ ಪ್ರೇಮ ಪ್ರೀತಿ ಎಂಬ ಹಳ್ಳಕ್ಕೆ ಬೀಳದಿರುವುದು ಬಹಳ ಒಳ್ಳೆಯದು, ನಾನು ಹೇಳಿದ ಈ ಹೆಣ್ಣಿನ ಗೋಳಿನ ಕಥೆಯಿಂದ ಅರಿಯಬಹುದು ಅಂತರ್ಜಾತಿ ವಿವಾಹಗಳೆಲ್ಲ ಪ್ರೇಮ ವಿವಾಹಗಳಲ್ಲ ಎಂದು. ದೊಡ್ಡವರು, ತಂದೆ ತಾಯಿಗಳು ನಿಂತು ಮದುವೆ ಮಾಡಿದರೆ ಮುಂದಿನ ಎಲ್ಲ ಆಗು ಹೋಗುಗಳಿಗೆ ಜವಾಬ್ದಾರರಾಗುತ್ತಾರೆ. ಈಗಿನ ಕಾಲದಲ್ಲಿ ಬಹಳಷ್ಟು ತಂದೆ ತಾಯಿಗಳು ತಮ್ಮ ಮಕ್ಕಳಿಗೆ ಎಂಥೆಂಥದೋ ಸಂಬಂಧ ತಂದು ಬೇಕಾಬಿಟ್ಟಿಯಾಗಿ ಕಟ್ಟುವುದು ಸುಳ್ಳು. ಏಕೆಂದರೆ ಜನರ ತಿಳುವಳಿಕೆ ಹೆಚ್ಚಾಗುತ್ತಿದೆ.

ಪ್ರಿಯ ಓದುಗರೆ, ಅಮಾಯಕತೆಯಲ್ಲಿ ಈ ಪ್ರಪಂಚದ ಮೋಸ ಅರಿಯದಿದ್ದರೆ, ದುಡುಕಿದರೆ ಜೀವನ ಜ್ಯೋತಿ ಶಾಶ್ವತವಾಗಿ ನಂದುತ್ತದೆ. ಕ್ಷಣಿಕ ಭೋಗಗಳಿಗೆ ಮರುಳಾದರೆ, ಮೋಸ ಹೋದರೆ ಉತ್ತಮ ವಿಶಾಲ ಮನೋಭಾವಗಳಿಂದ ಕೂಡಿ ಬಾಳನ್ನು ಬಂಗಾರಗೊಳಿಸುವ ಬದಲು ಸರ್ವನಾಶ ಮಾಡಿಕೊಂಡಂತಾಗುತ್ತದೆ. ನಮ್ಮ ಹೆಣ್ಣುಮಕ್ಕಳು ವಂಚಕರ ಹುಸಿ ಪ್ರೀತಿಗೆ ಮರುಳಾಗದೆ ವಿದ್ಯಾವಂತೆಯರಾಗಿ ಸದ್ಗುಣಗಳಿಗೆ ಆಗರವಾಗಿ, ನಂದಾದೀಪದಂತೆ ಬೆಳಕಾಗಿ, ಹಲವು ಕ್ಷೇತ್ರಗಳಲ್ಲಿ ನಿಸ್ವಾರ್ಥದಿಂದ ದುಡಿಯುವ ದಿಟ್ಟ ಮಹಿಳೆಯರಾಗಿ ಸಾರ್ಥಕ ಬದುಕನ್ನು ರೂಪಿಸಿಕೊಳ್ಳಬೇಕೆಂಬುದೇ ಈ "ಮಾನಸ"ದ ಮೂಲಕ ನನ್ನ ಮನವಿ.

ಆನಂದವಲ್ಲಿ.

---

## ಲೋಹಿಯಾ ಅವರ ವಿಚಾರಗಳು

ಮನುಷ್ಯನ ಮೈಬಣ್ಣ ಸೌಂದರ್ಯಕ್ಕೆ ಒಂದು ಪ್ರಮಾಣವಲ್ಲ. ಅಥವಾ ಅದು ಮತ್ತಾವುದೇ ಬಗೆಯ ಶ್ರೇಷ್ಠತೆಯ ಪ್ರಮಾಣವೂ ಅಲ್ಲ. ಹಾಗಿದ್ದರೂ ಚಂದವಾದ ಮೈ ಬಣ್ಣ ಮತ್ತು ಸೌಂದರ್ಯ ಇವರಡೂ ಒಂದೇ ಎಂಬಂತೆ ನಾವು ತಿಳಿಯುತ್ತೇವೆ. ಯುರೋಪಿನ ಬಿಳಿ ನೆಲದಲ್ಲಿ ಮಾತ್ರವಲ್ಲ, ಏಷ್ಯಾ ಅಥವಾ ಅಮೆರಿಕದ ಉಷ್ಣ ಹವೆಯಲ್ಲಿ ಕೂಡ ಇದೇ ಭಾವನೆ ಮತ್ತಷ್ಟು ಹೆಚ್ಚಾಗಿಯೇ ಇದೆ. ಸೌಂದರ್ಯ ಮೀಮಾಂಸೆಯ ಈ ಅಪಮಾರ್ಗ ವಿವರಣೆ ನಿಲುಕದಂಥದ್ದು.

ಕಪ್ಪು ಜನ ಯಾವಾಗಲೂ ಔದಾಸೀನ್ಯಕ್ಕೆ ಗುರಿಯಾಗಿದ್ದರು ಎನ್ನುವ ಹಾಗಿಲ್ಲ; ಕನಿಷ್ಠ ಭಾರತದ ಮಟ್ಟಿಗಂತೂ ಇದು ಸತ್ಯ. ಸಂಸ್ಕೃತ ಸಾಹಿತ್ಯದಲ್ಲಿ 'ಶ್ಯಾಮಾ' (ಕಪ್ಪಾಗಿ ಇರುವವಳು) ಎಂದರೆ ನಿಜವಾಗಿ ಚಂದವಾಗಿರುವವಳೇ. ಎಳೆಯವಳೂ ಚೆಲುವೆಯೂ (ಎಳೆತನ ಮತ್ತು ಚೆಲುವು ಎರಡೂ ಒಂದೇ ಎಂಬಂತೆ ಕಾಣುತ್ತವೆ ಅನೇಕ ಸಲ) ಆಗಿದ್ದರೆ ಸಾಕು, ಆಕೆ ವಾಸ್ತವವಾಗಿ ಕಪ್ಪು ಅಲ್ಲದಿದ್ದರೂ 'ಶ್ಯಾಮಾ' ಎನ್ನಿಸಿಕೊಳ್ಳುತ್ತಿದ್ದಳು. ಆಶ್ಚರ್ಯಮೂಕವಾದ ಮೇಘಕ್ಕೆ ತಾನು ಸಂದೇಶ ತಲುಪಿಸಬೇಕಾದ ಯಕ್ಷಸುಂದರಿಯನ್ನು ಗುರುತಿಸುವುದು ಹೇಗೆ ಎಂಬುದನ್ನು ಕಾಳಿದಾಸ ವರ್ಣಿಸುತ್ತಾನೆ— ತೆಳುಮೈ, ಕೆಂಪು ತುಂಬಿದ ತುಟಿಗಳು, ಚಕಿತ ಹರಿಣಿಯದೆನ್ನಿಪಂಥ ಕಣ್ಣುಗಳು, ಮೆಲು ನಡೆ— ಇಂಥ ಸಲ್ಲಕ್ಷಣಗಳ "ಶ್ಯಾಮಾ" ಆಕೆ ಎಂದು.

ಭಾರತೀಯ ಪುರಾಣದ ಮಹಾಸ್ತ್ರೀ ನೀಲವರ್ಣೆಯಾಗಿದ್ದಳು: ದ್ರೌಪದಿಗೆ ಕೃಷ್ಣೆಯೆಂದೂ ಹೆಸರಿತ್ತು. ಆಕೆಯ ಐವರು ಗಂಡಂದಿರು ಮತ್ತು ಇನ್ನೂ ಒಂದೆರಡು ರಹಸ್ಯಪ್ರೇಮದ ಸೂಚನೆ— ಇವು, ಪ್ರಚಲಿತವಿರುವ ಗಂಡು ಜಂಭಕ್ಕೆ ಮೆಚ್ಚಿನಿಸದಿದ್ದರಿಂದ ಪ್ರಾಯಃ ಆಕೆಯ ಬಗ್ಗೆ ಹೆಚ್ಚಿನ ಔದಾಸೀನ್ಯ ಬೆಳೆದುಬಿಟ್ಟಿದೆ. ಪತಿವ್ರತೆಯರೂ ಶ್ವೇತವರ್ಣೆಯರೂ ಆದ ಸೀತಾಸಾವಿತ್ರಿಯರು ಭಾರತೀಯ ಸ್ತ್ರೀತ್ವವನ್ನು ಪ್ರತಿನಿಧಿಸುತ್ತಾರೆ ಎಂಬ ಮಾತು ಸುಳ್ಳಲ್ಲ. ಆದರೆ ಇವರ ಕೂಡ ಹೀಗೆ ಪ್ರತಿನಿಧಿಸುವವರು ಇನ್ನೂ ಕೆಲವರಿದ್ದಾರೆ ಎಂಬುದನ್ನು ನಿರ್ಲಕ್ಷಿಸುವಲ್ಲಿ ವಿವೇಕ ಕುಂಟಿತು ಎನ್ನಿಸುತ್ತದೆ. ಭಾರತೀಯ ಪುರಾಣಕಲ್ಪನೆಯಲ್ಲಿ ಪರಿಮಳ ಸೂಸುವಂಥ ತುಂಬ ಚೆಲುವಾದ ಎರಡು ಪುಷ್ಪಗಳು ಕೃಷ್ಣ ಮತ್ತು ಕೃಷ್ಣೆ; ಒಬ್ಬ ಗಂಡಸು, ಇನ್ನೊಬ್ಬಳು ಹೆಂಗಸು; ಇಬ್ಬರೂ ಕಪ್ಪು.

ಇಡೀ ಪ್ರಪಂಚದ ಪುರಾಣಗಳಲ್ಲಾಗಲಿ ಇತಿಹಾಸದಲ್ಲಾಗಲಿ ಸಮಕಾಲೀನ ಪುರುಷರೆಲ್ಲರಿಗಿಂತಲೂ ಬುದ್ಧಿವಂತಳೂ ಕುಶಲಳೂ ಆಗಿರುವ ಒಬ್ಬಳೇ ಹೆಣ್ಣು ಪ್ರಾಯಃ ದ್ರೌಪದಿ. ಆಕೆಯನ್ನು ಕೃಷ್ಣನೊಡನೆ ಹೋಲಿಸಿ ನೋಡುವ ಪ್ರಶ್ನೆ ಏಳುವುದಿಲ್ಲ. ಏಕೆಂದರೆ, ಸದಾ ಕುಶಲಳೂ, ತಲಸ್ಪರ್ಶಿಯಾದ ಜ್ಞಾನ

ವುಳ್ಳವಳೂ ಆದ ಈಕೆ ಕೃಷ್ಣನಿಗೆ ಆತ್ಮೀಯಳಾಗಿದ್ದಳು. ಆತನ ಲೀಲಾ ಜೀವನದಲ್ಲಿ ರಾಧೆ ಇದ್ದ ಹಾಗೆ ಕರ್ಮಜೀವನದಲ್ಲಿ ದ್ರೌಪದಿ ನಾಯಿಕೆಯಾಗಿದ್ದಳು, ಪ್ರೇರಣೆಯಾಗಿದ್ದಳು. ಮಹಾಭಾರತದಲ್ಲಿ ಕೃಷ್ಣಕೃಷ್ಣೆಯರು ಸಮಾನ ಯೋಗ್ಯತೆಯ ನಾಯಕದ್ವಯರು, ಘರ್ಷಣೆಯ ಛಾಯೆಯೂ ಕಾಣದ ಸಹವರ್ತಿಗಳು. ಇಂಥ ದ್ರೌಪದಿ ಕಪ್ಪು ಬಣ್ಣದವಳಾಗಿದ್ದಳು.

ಪ್ರಪಂಚದಲ್ಲಿ ಜಾಹೀರಾಗುವ ಸಮಾಚಾರಗಳಿಂದ ಊಹಿಸುವುದಾದರೆ, ಸೌಂದರ್ಯ ಸ್ಪರ್ಧೆಗಳಂಥ ವಿಧಿಗಳಲ್ಲಿ ಎದೆ — ಟೊಂಕ — ತೊಡೆಗಳ ಅಳತೆಗಳು ಮುಂತಾದವೇ ಸೌಂದರ್ಯ ನಿರ್ಣಾಯಕಗಳೆನಿಸಿಕೊಳ್ಳುತ್ತವೆ. ಆದರೆ ಹೇಗೋ ಕಪ್ಪು ಚಲುವೆಯೊಬ್ಬಳು ಈ ತನಕ ಆಯ್ಕೆಯಾಗಿದ್ದಿಲ್ಲ. ಸುಮಾರು ಅರ್ಧ ಶತಮಾದದಿಂದ ನಡೆದಿರಬಹುದಾದ ಈ ಸೌಂದರ್ಯ ಸ್ಪರ್ಧೆಗಳಲ್ಲಿ, ಒಮ್ಮೆ ಮಾತ್ರ ಅದೂ ಇತ್ತೀಚಿಗೆ ಜಪಾನಿನ ಒಬ್ಬಳು "ವಿಶ್ವ ಸುಂದರಿ" ಪದವಿಯಲ್ಲಿ ಕಾಲಿಡುವುದಕ್ಕಾಯಿತು. ವಿಶ್ವದ ಸುಂದರಿಯ ಕಿರೀಟವನ್ನು ತಲೆಗಿಡುವುದಕ್ಕೆ ಮುಂಚೆ, ಅದಕ್ಕೆ ಹಿಂದೆಯೂ ಜಪಾನಿನ ಹೆಣ್ಣುಮಕ್ಕಳು ಸುಂದರಿಯರಾಗಿದ್ದಿರಬೇಕು ; ಈಗ ಒಮ್ಮೆಗೇ ಅವರು ಹಿಂದೆಂದಿಗಿಂತ ಚಲುವೆಯರಾಗಿಬಿಟ್ಟಿದ್ದಾರೆ ಎಂಬುದು ಇರಲಾರದು. ಇಲ್ಲಿ ಅವರು ಬದಲಾದದ್ದಲ್ಲ, ಬದಲಾದದ್ದು ಕ್ಯಾಲಿಪೋರ್ನಿಯಾದ ಸೌಂದರ್ಯ ವಿಮರ್ಶಕರ ನೋಡುವ ಕಣ್ಣು. ಆಫ್ರಿಕಾ ಏಷ್ಯಾಗಳ ಕಪ್ಪುಬಣ್ಣದ ಮೇಲೂ ಮುಂದೊಂದು ಕಾಲದಲ್ಲಿ ಇಂಥ ಸರದಿ ಸುಳಿಯಬಹುದು.

ಯಾರು ಸೌಂದರ್ಯವನ್ನು ಬಣ್ಣದೊಡನೆ ತಳುಕಿಹಾಕಿ ಗೊಂದಲಗೊಳಿಸಿಕೊಳ್ಳುತ್ತಾರೋ ಅವರು ಅಸ್ಸಾಮಿನ ನಿಜವಾದ ಚೆಲುವನ್ನು ತಿಳಿಯಲಾರರು. ಅಸ್ಸಾಮಿನ ಟೀ ತೋಟದ ಹೆಣ್ಣುಗಳು, ಅವರಲ್ಲಿ ಕೆಲವರಂತೂ — ಮುಖ್ಯವಾಗಿ ಚತ್ತೀಸ್‌ಘರ್ ಮತ್ತು ಒರಿಯಾ ಕುಲದವರು — ಆಕಾರ ಸೌಷ್ಠವದಿಂದ ಮುಖದ ಕಾಂತಿಯಿಂದ ಕಣ್ಣನ್ನು ಸೆಳೆದು ಯಾವತ್ತಿಗೂ ಸೆರೆಹಿಡಿದಿಟ್ಟು ಬಿಡುತ್ತಾರೆ. ಮತ್ತು ಈ ಕೆಲಸಗಾರರ ಹೆಣ್ಣುಗಳ ಮೈಬಣ್ಣ ಕಪ್ಪು. ಅನೇಕಾನೇಕರು ತಮ್ಮ ಬದುಕಿನುದ್ದವೂ, ಕಪ್ಪು ಬಿಳುಪುಗಳೆರಡರಲ್ಲೂ ಕಾಣಬಹುದಾದ ಚೆಲುವಿನ ಮರ್ಮವನ್ನು ಒಮ್ಮೆಯಾದರೂ ತಟಕ್ಕನೆ ಹಾಯದೆ ಉಳಿದುಬಿಡುತ್ತಾರೆ. ಕೆಲವರು ತಾರುಣ್ಯ ಕಳೆದು ಈ ಸತ್ಯವನ್ನು ತಿಳಿಯುತ್ತಾರೆ. ಪುರಾಣ ಕೂಡ ತರುಣ ಕೃಷ್ಣನಿಗೆ ಶ್ವೇತ ಶುಭ್ರೆಯಾದ ರಾಧೆಯನ್ನು ಸಂಗಾತಿಯಾಗಿ ಮಾಡಿ, ಅನಂತರದ ನಡುವಯಸ್ಸಿನ ರಾಜಕಾರಣಪಟುವಿಗೆ ಕೃಷ್ಣೆಯಾದ ದ್ರೌಪದಿಯನ್ನು ಆತ್ಮೀಯಳನ್ನಾಗಿ ಮಾಡಿದೆ. ಯಾರೊಬ್ಬರೂ ವಯಸ್ಸು ಬೆಳೆದಂತೆ ಉತ್ತರಕ್ಕಿಂತ ದಕ್ಷಿಣವನ್ನೇ ಪ್ರೀತಿಸಲು ತೊಡಗುತ್ತಾರೆ, ಕಪ್ಪು ಬಣ್ಣದ ಕಡೆ ಆಕರ್ಷರಾಗುತ್ತಾರೆ.

ನಾನು ಹೇಳುತ್ತಿರುವುದು ಗಂಡಿನ ದೃಷ್ಟಿಕೋನದಿಂದ, ಚೆಲುವಿನ ಬಗ್ಗೆ. ಇದರಿಂದ, ಹೆಣ್ಣು ಚಂದದ ಗೊಂಬೆಯಲ್ಲದೆ ಬೇರೆಯಲ್ಲ ಎಂಬುದು ನನ್ನ ಅಭಿಪ್ರಾಯ ಎಂದು ಗ್ರಹಿಸಬಾರದು. ಒಮ್ಮೆ ಅದೇ ನನ್ನ ದೃಷ್ಟಿಕೋನವಾಗಿದ್ದರೆ, ದ್ರೌಪದಿಯ ಸೌಂದರ್ಯವನ್ನು — ಯಾವಳ ಅನುಪಮ ಜ್ಞಾನಶಕ್ತಿಯೇ ಆಕೆಯ ಸೌಂದರ್ಯದ ಮೂಲನಿಧಿಯೆಂಬಂತೆ ತೋರುತ್ತದೆಯೋ ಆ ಅಂಥ ಸೌಂದರ್ಯವನ್ನು — ಕಂಡುಕೊಳ್ಳುವುದು ನನಗೆ ಅಶಕ್ಯವಾಗುತ್ತಿತ್ತು. ಅಥವಾ, ಯಾರಲ್ಲಿ ದುಡಿಮೆ, ಸ್ವಾತಂತ್ರ್ಯ, ಚೆಲುವು ಇವುಗಳನ್ನು ಪ್ರತ್ಯೇಕ ಪ್ರತ್ಯೇಕ ವಿಂಗಡಿಸಿ ಹೇಳುವುದು ಸಾಧ್ಯವಿಲ್ಲವೆಂದು ತೋರುವುದೋ ಅಂಥ ಅಸ್ಸಾಮಿನ ಟೀ ಹೆಣ್ಣುಗಳ ಚೆಲುವೂ ನನಗೆ ಕಾಣಸಿಗುತ್ತಿರಲಿಲ್ಲ. ನಾನು ಹೆಣ್ಣಾಗಿದ್ದರೂ ಪ್ರಾಯಃ, ಗಂಡಿನ ಚೆಲುವನ್ನು ಹೆಚ್ಚು ಭಾಗ ಇದೇ ದೃಷ್ಟಿಯಿಂದ ನೋಡುತ್ತಿದ್ದೆ. ಆದರೆ — ಮೊದಲನೆಯದಾಗಿ ಗಂಡಸಿನ ಮೈ ಬಣ್ಣದ ಕಾರಣ ಹೆಂಗಸಿನಂತೆ ಆ ಮೊತ್ತದ ಕೀಳು ನೋಟಕ್ಕೆ ಗುರಿಯಾಗುವುದಿಲ್ಲ. ಎರಡನೆಯದಾಗಿ, ಹೆಣ್ಣು ಗಂಡಿನ ಚೆಲುವನ್ನು ಹೇಗೆ ನೋಡುತ್ತದೆಯೋ ಅಷ್ಟೇ ಮಟ್ಟಿಗೆ, ತನ್ನ ಚೆಲುವನ್ನೇ ಅಳೆದು ಅಂದಾಜು ಮಾಡಿಕೊಳ್ಳುವುದರಲ್ಲೂ ಅತ್ಯಾಸಕ್ತಿ ಹೊಂದಿಬಿಡುತ್ತದೆ. ಇವೊತ್ತು ಚೆಲುವು ಎನ್ನುವುದು ಹೆಣ್ಣಿಗೆ ಒಂದು ಗುಣ ಎನ್ನುವಂತಿದೆ. ಒಂದು ವೇಳೆ ಗಂಡಿಗೂ ಇಷ್ಟೇ ಮಟ್ಟಿಗೆ ಚೆಲುವು ಅಗತ್ಯವೆನ್ನುವಂತಾದರೆ — ಆ ಕಾಲ ಬಂದೀತೆನ್ನುವುದು ನನಗೆ ಸಂದೇಹ — ಆಗಲೂ ಈ ತನಕ ಹೇಳಿದ್ದಲ್ಲ, ಹೆಚ್ಚಲ್ಲದಿದ್ದರೆ ಇಷ್ಟೇ ನಿಜವಾಗಿಯಾದರೂ ಉಳಿಯತ್ತದೆ.

ಸೌಂದರ್ಯ ಮತ್ತು ಲೈಂಗಿಕತೆ ಒಂದಕ್ಕೊಂದು ಹತ್ತಿರ ಸಂಬಂಧಿಸಿದವು. ಕಪ್ಪು ಹೆಣ್ಣುಗಳು ವಾಸ್ತವವಾಗಿ ಯಜಮಾನಿಕೆ ಮೆರೆವ ಗಂಡುಗಳ ಲೈಂಗಿಕತೆಗೆ ಆಕರ್ಷಕವಾಗಿವೆ. ಆದರೆ ಇಂಥ ಆಕರ್ಷಣೆಯ ಕೇಂದ್ರಗಳು ನೈಟ್ ಕ್ಲಬ್‌ಗಳು ಇಲ್ಲವೆ ಮುಚ್ಚಿನ ಮರೆಗಳು. ಇಂಡಿಯಾದ ವಿಷಯಕ್ಕೆ ಬಂದರೆ ಇಲ್ಲಿ ಜಾತಿಪದ್ಧತಿ ಮತ್ತೂ ಹೆಚ್ಚಿನ ಆತಂಕಗಳನ್ನು ನಿರ್ಮಿಸಿಬಿಟ್ಟಿದೆ. ಇಲ್ಲಿ ಮೇಲು ಜಾತಿ ಹಾಗೂ ಕೀಳು ಜಾತಿಯ ಗಂಡು ಹೆಣ್ಣುಗಳ ನಡುವೆ ಬದುಕಿನ, ಭಾಷೆಯ ನಡವಳಿಕೆಯ ರೀತಿಗಳೇ ಬೇರೆಯಾಗಿವೆ. ಅಷ್ಟೇ ಅಲ್ಲ, ಈ ರೀತಿಗಳೆಲ್ಲ ಬೇರೆತನವನ್ನು ವಿಧಿಸುವುದಕ್ಕೇ ರೂಢಿಸಿಕೊಂಡಾಗಿವೆ. ಕೆಳಜಾತಿಯ ಕಪ್ಪು ಹೆಣ್ಣು ತನ್ನ ಪ್ರೇಮದಲ್ಲಿ ಅಷ್ಟೇ ಪ್ರಾಮಾಣಿಕವಾಗಿದ್ದರೂ ಪ್ರಾಯಃ, ಮೇಲುಜಾತಿಯವರ ಪ್ರೇಮತಂತ್ರಗಳನ್ನು ಸವಿಯಲಾರಳು, ರೂಢಿಸಿಕೊಳ್ಳಲಾರಳು. ಏನೆಂದರೂ ಲೈಂಗಿಕತೆಯಿಲ್ಲವೆ ಪ್ರೇಮವಿಲ್ಲ, ಪ್ರೇಮವಿಲ್ಲದೆ ಸೌಂದರ್ಯವಿಲ್ಲ. ಪ್ರೇಮಿಸುತ್ತಿರುವ ಪ್ರೇಮ ಕೊಳ್ಳುತ್ತಿರುವ ಹೆಣ್ಣು ಕಪ್ಪಿರಲಿ, ಬಿಳುಪಿರಲಿ, ನಕ್ಷತ್ರ ತುಂಬಿ ಗೊಂಚಲು ಮಿನುಗುವ ಆಕಾಶದ ಚಲುವನ್ನು ಬೆಳಗುತ್ತಾಳೆ. ಯಾರು ಸೌಂದರ್ಯವನ್ನು ಕುರಿತು ಆಡುತಾರೋ ಹಾಡುತ್ತಾರೋ ಅಂಥವರೇ ಮುಖ್ಯವಾಗಿ, ಕಳೆದ ಕೆಲವು ಶತಮಾನಗಳಲ್ಲಿ, ಕಪ್ಪು ಹೆಣ್ಣುಗಳನ್ನು ಅಂಥ ಪ್ರೇಮದಿಂದ ವಂಚಿ

ಸಿಟ್ಟಿದ್ದಾರೆ. ಬದುಕಿನ ರೀತಿ ವಿಧವಿಧವಾಗಿರುವುದು, ಇಡೀ ಜಗತ್ತಿನಲ್ಲಿ ಕಾಲಕ್ರಮದಲ್ಲಿ ಬೆಳೆದು ಬಂದ ಕಪ್ಪು ಬಿಳುಪುಗಳ ಏರುಪೇರು, ಇಂಡಿಯಾದಲ್ಲಿನ ಅನುಷ್ಠಾನ — ಇವೆಲ್ಲ ಶ್ವೇತರು - ವರ್ಣೀಯರುಗಳ ನಡುವೆ ಅಚಲ ಆತಂಕಗಳನ್ನು ಕಟ್ಟಿ ನಿಲ್ಲಿಸಿವೆ. ಈ ಆತಂಕಗಳೆಲ್ಲ ಕಳೆದುಹೋಗಲು ಕಾಲ ಬೇಕಾದೀತು. ಆದರೆ ಈ ಆತಂಕಗಳಲ್ಲೆಲ್ಲ ತೀರ ಮಹತ್ತಾದ್ದು ಒಂದು ದೊಡ್ಡ ತಪ್ಪಿನ ಮೇಲೆ ನಿಂತಿದೆ, ಮೈಬಣ್ಣವನ್ನೇ ಚೆಲುವೆಂದು ಭ್ರಮಿಸುವ ತಪ್ಪಿನ ಮೇಲೆ.

ಜಗತ್ತಿನ ಮಹತ್ತರ ದಬ್ಬಾಳಿಕೆಗಳಲ್ಲಿ ವರ್ಣಹಿಂಸೆ ಒಂದಾಗಿದೆ. ಸಾಮಾನ್ಯವಾಗಿ ಹೆಣ್ಣುಜಾತಿಯೇ ದಬ್ಬಾಳಿಕೆಗೆ ತುತ್ತಾಗಿದೆ. ಸ್ತ್ರೀ ವರ್ಗದ ಪ್ರತಿಭೆ ಅಥವಾ ಜನ್ಮಶಕ್ತಿಗೆ ತಕ್ಕುದಾದ ಅಭಿವ್ಯಕ್ತಿ ದೊರಕಿಸಿಕೊಡದೆ ಮಾನವಕುಲ ಅಷ್ಟುಮಟ್ಟಿಗೆ ದರಿದ್ರವಾಗಿಯೇ ಉಳಿದಿದೆ. ಸಂಖ್ಯೆಯಲ್ಲಿ ಬಹಳ ಹೆಚ್ಚಾಗಿರುವ ವರ್ಣೀಯ ಸ್ತ್ರೀಯರಂತೂ ಇನ್ನೂ ಹೆಚ್ಚಿನ ದಬ್ಬಾಳಿಕೆಗೆ ಸಿಕ್ಕಿದ್ದಾರೆ. ಕಾತರ ಮತ್ತು ನೈಚ್ಯತೆಗಳನ್ನು ತಿನ್ನಿಸುತ್ತಲೇ ಅವರನ್ನು ಸಾಕುತ್ತಿದ್ದೇವೆ. ಒಬ್ಬ ಕಪ್ಪು ಹುಡುಗಿ — ಆಕೆ ಸಣ್ಣ ಮಗುವಾಗಿದ್ದರೂ ಕೂಡ ತನ್ನ ಕುಟುಂಬದ ಬಿಳಿ ಹುಡುಗಿಯ ತಂಗಿಯೇ ಆಗಿದ್ದರೂ ಕೂಡ — ಔದಾಸೀನ್ಯಕ್ಕೆ, ಕೀಳುನೋಟಕ್ಕೆ, ಕೀಳ್ದರ್ಜೆಗೆ ಮೀಸಲಿಟ್ಟ ಅಪಮನ್ನಣೆಗಳಿಗೆ ತನ್ನನ್ನು ಸದಾ ಒಪ್ಪಿಸಿಕೊಳ್ಳಬೇಕು, ಅದಕ್ಕೇ ತನ್ನನ್ನು ರೂಢಿಸಿಕೊಳ್ಳಬೇಕು. ಯಾವುದೇ ಗಂಡುಮಗುವಿನೊಡನೆ ಮತ್ತಾವುದೇ ಹೆಣ್ಣುಮಗುವನ್ನು ಹೋಲಿಸಿದರೂ ಕಾಣುತ್ತದೆ, ಹೆಣ್ಣು ಗಂಡಿನಂತೆ ತನ್ನ ಸಹಜ ಬೆಳವಣಿಗೆಗೆ ಬೇಕಾದ ಅವಕಾಶವನ್ನು ಪಡೆಯದೆ ಹೋಗುತ್ತದೆ ಎಂಬುದು. ಇದಕ್ಕೂ ಹೆಚ್ಚೆಂದರೆ, ಹುಡುಗಿ ಕಪ್ಪಾಗಿದ್ದರಂತೂ ಮತ್ತೂ ಹೆಚ್ಚಿನ ಅಪಮಾನಕ್ಕೆ ಗುರಿಯಾಗುತ್ತಾಳೆ, ಕೀಳ್ತನದ ಭಾರಕ್ಕೆ ನಲುಗುತ್ತಾಳೆ. ಕಪ್ಪು ಗಂಡಿಗೆ ಕೂಡ ಈ ಭಾರ ಇಲ್ಲವೆನ್ನುವಂತಿಲ್ಲ, ಹೆಣ್ಣಿನಷ್ಟಿಲ್ಲದಿದ್ದರೂ.

ಹಾಗಿದ್ದರೆ ಕಪ್ಪುಬಣ್ಣದ ಸುಂದರಸ್ತ್ರೀಯರು ತಮ್ಮ ಹೆಚ್ಚಳವನ್ನು ಅಥವಾ ಕನಿಷ್ಠ ತಮ್ಮ ಸಮಾನತೆಯ ಹಕ್ಕನ್ನು ಸ್ಥಾಪಿಸಿಕೊಳ್ಳುವುದು ಯಾವಾಗ? ಅಥವಾ ಪ್ರಾಯಃ ಬೇರೆ ಕ್ಷೇತ್ರಗಳಲ್ಲಿ ಆಗುವಂತೆ ಇಲ್ಲಿಯೂ ಕ್ರಾಂತಿಯ ದಾರಿಯನ್ನು ಹಿಂಸಕರೇ ಸವೆಸಿಕೊಡುತ್ತಾರೋ ಏನೋ ಸೌಂದರ್ಯವನ್ನು ಅಳೆಯುವಲ್ಲಿ ಮತ್ತು ಮೈಬಣ್ಣ ಹಾಗೂ ಸೌಂದರ್ಯಗಳ ಅಂತರವನ್ನು ಗುರುತಿಸುವಲ್ಲಿ ರಸಪ್ರಜ್ಞೆಯ ಒಂದು ಹೊಸ ಕ್ರಾಂತಿಯೇ ನಡೆಯಬೇಕು. ಅಂಥ ಕ್ರಾಂತಿ ಮಾತ್ರ ಇಡೀ ಪ್ರಪಂಚದ ಮೇಲೆ ಸ್ವಾತಂತ್ರ್ಯದ ಹೊಸ ಗಾಳಿಯನ್ನೇ ತೂರಿಬಿಡಬಲ್ಲದು. ಯಾವುದೇ ರಾಜಕೀಯ ಅಥವಾ ಆರ್ಥಿಕ ಕ್ರಾಂತಿಗೆ ಸರಿಸಾಟಿಯಾಗಿ.

( "ರಾಜಕೀಯದ ಮಧ್ಯೆ ಬಿಡುವು" ಗ್ರಂಥದಿಂದ ಆಯ್ದ ಭಾಗಗಳು. )

# ಓದುಗರ ವಿಭಾಗ

ಮಹಿಳೆಯರ ಮೂಲಭೂತ ಸಮಸ್ಯೆಗಳಿಗೆ ಪರಿಹಾರ ಹಾಗೂ ಅವರ ನೋವು — ನಲಿವುಗಳಿಗೆ ಸ್ಪಂದಿಸುವ ನಿಮ್ಮ ಪತ್ರಿಕೆಯ ಪ್ರಯತ್ನ ಫಲಪ್ರದವಾಗಲೆಂದು ಹಾರೈಸುವ,

ಕೊಂಪಲ ಲಕ್ಷ್ಮೀಕಾಂತ್

ಲಿಂಗಸುಗೂರು.

ಪತ್ರಿಕೆಯು ಉತ್ತಮ ಅಂಕಣಗಳೊಂದಿಗೆ ಸ್ತ್ರೀಯರ ನೋವು ನಲಿವುಗಳ ಬಗ್ಗೆ ಕ್ಷ — ಕಿರಣವನ್ನು ಬೀರುವತ್ತ ಗಮನಹರಿಸಿರುವುದು ಸ್ತುತ್ಯಾರ್ಹ.

ಎ. ಕೆ. ಜಯರಾಮ್

ಕೊಲ್ಲಮೊಗರು.

ಸ್ತ್ರೀಯರ ಮೇಲಿನ ದಬ್ಬಾಳಿಕೆ, ಅತ್ಯಾಚಾರಗಳನ್ನು ಖಂಡಿತಾ ಖಂಡಿಸುವ, ಸ್ತ್ರೀ ಸೃಜನಾತ್ಮಕ ಅಭಿವ್ಯಕ್ತಿಯ ವೇದಿಕೆಯಾಗಬಯಸಿರುವ ನಿಮ್ಮ ಪತ್ರಿಕೆಗಾಗಿ ನಿಮ್ಮನ್ನು ನಾನು ಅಭಿನಂದಿಸುತ್ತೇನೆ.

ದುರ್ಗಾಸುತೆ

ಬೆಂಗಳೂರು.

ಮಾನಸ ಮಹಿಳೆಯರಿಗೆ ಹಾಗೂ ಇತರರಿಗೂ ಉಪಯುಕ್ತವಾಗಿದೆ.

ಡಾ. ಎನ್. ಎಚ್. ರಾವ್

ಅಂಬಿಕನಗರ.

ಮಾನಸ ಯುವ ವೇದಿಕೆಯ ಮೇಲೆ ಹೊಸ ಬೆಳಕು ಚೆಲ್ಲಲಿ. ಮಹಿಳೆಯರ ಬದುಕಿನ ಆಶಾಕಿರಣವಾಗಿ ಮೂಡಿಬರಲಿ.

ಶ್ರೀಪತಿ ಎಲ್. ಸಿ.

ಅಂಬಿಕಾನಗರ.

# ಅಕ್ಕ – ಪಕ್ಕ

ಈಗ ಯಾವುದೇ ಚಿತ್ರರಂಗದಲ್ಲಿ ನಾಯಕಿಗೆ "ಪ್ರಾಮಿನೆನ್ಸ್" ಇರುವ ಚಿತ್ರಗಳು ತಯಾರಾಗುವುದು ಕಡಿಮೆ. ಅಂಥ ಚಿತ್ರಗಳು ಇಲ್ಲವೇ ಇಲ್ಲವೆಂದರೂ ಸರಿಯೇ. ನಮ್ಮಲ್ಲಿ ನಾಯಕ ಪ್ರಧಾನ ಕತೆಗಳೇ ಪ್ರಾಶಸ್ತ್ಯ. ನಾಯಕಿ ಎಂದರೆ ಎರಡು ಹಾಡು ಎರಡು ಕುಣಿತಕ್ಕೆ ಮೀಸಲು.

ಸುಮಲತ (ಚಿತ್ರನಟಿ)

ದೇಶದೊಳಗೇ ಇರಲಿ, ವಿದೇಶಗಳಲ್ಲೇ ಇರಲಿ ಭಾರತೀಯರ ಸ್ವಭಾವದಲ್ಲಿ ಹೆಚ್ಚಿನ ಬದಲಾವಣೆ ಕಾಣದು. ಈ ಹಿನ್ನೆಲೆಯಲ್ಲಿ ಅಮೇರಿಕದಲ್ಲಿ ಹಾಗೂ ಬ್ರಿಟನ್ನಲ್ಲಿ ಇರುವ ಭಾರತೀಯ ಮಹಿಳೆಯರು ಹೆಚ್ಚು ಹೆಚ್ಚಾಗಿ ಮಗುವಿನ ಲಿಂಗ ಪತ್ತೆಹಚ್ಚುವ ಅಮ್ನಿಯೋ ಸಿಂಥಿಸಿಸ್ ಪರೀಕ್ಷೆಗೆ ಒಳಗಾಗುತ್ತಿರುವುದರಲ್ಲಿ ಆಶ್ಚರ್ಯವಿಲ್ಲ. ಇದರ ಪರಿಣಾಮ ಹೆಣ್ಣು ಭ್ರೂಣ ಹತ್ಯೆಗಾಗಿ ಗರ್ಭಪಾತ ಮಾಡಿಸಿಕೊಳ್ಳುವುದೇ ಆಗಿದೆ.

ರಾಧಾ ಕೃಷ್ಣ
(ಪತ್ರಕರ್ತೆ)

ಮಹಿಳೆಯರ ಅಭಿವೃದ್ಧಿಗಾಗಿ ಕೇಂದ್ರ ಸರಕಾರ ೧೮೦ ಅಂಶಗಳ ಕಾರ್ಯಕ್ರಮಗಳನ್ನು ಗುರುತಿಸಿಯೆಲ್ಲದೆ ೧೩೦ ಅಂಶಗಳ ಕಾರ್ಯಕ್ರಮಗಳನ್ನು ಈಗಾಗಲೇ ಪ್ರಾರಂಭಿಸಿದೆ. ಸ್ತ್ರೀಯರಲ್ಲಿ ಅಕ್ಷರಜ್ಞಾನವನ್ನು ಬೆಳೆಸಲು ಸರ್ಕಾರ ಹಲವಾರು ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದೆ.

ರಾಜೀವಗಾಂಧಿ
ಪ್ರಧಾನ ಮಂತ್ರಿ.

ಹೆಣ್ಣು ತಾನು ಪ್ರೀತಿಸುವವನಿಗೆ ನೂರಕ್ಕೆ ನೂರುಪಾಲು ಅರ್ಪಿಸಿಕೊಳ್ಳಬೇಕಾದ ಅಗತ್ಯವಿಲ್ಲ. ಏಕೆಂದರೆ ಅವನಿಂದ ಆ ಪ್ರಮಾಣದ ನಿರೀಕ್ಷೆಯೇ ಇರುವುದಿಲ್ಲ.

ಪೂಜಾಬೇಡಿ
(ಸಿನಿಮಾತಾರೆ.)

ವರದಕ್ಷಿಣೆಯ ಸಮಸ್ಯೆಯನ್ನು ಬಿಟ್ಟು ಮಹಿಳೆಯರ ಇನ್ನಿತರ ಸಮಸ್ಯೆಗಳನ್ನು ಪತ್ರಿಕೆಗಳು ನಿರ್ಲಕ್ಷಿಸುತ್ತವೆ.

ಮಾರ್ಗರೆಟ್ ಆಳ್ವ
(ಕೇಂದ್ರದ ಸಮಾಜ ಕಲ್ಯಾಣ ಸಚಿವೆ.)

ಸಂವಿಧಾನದಲ್ಲಿ ಮಹಿಳೆಯರ ಹಕ್ಕುಗಳ ಸನದು ಒಂದನ್ನು ಸೇರಿಸಬೇಕು. ಇದಕ್ಕಾಗಿ ಸಂವಿಧಾನವನ್ನು ತಿದ್ದಬೇಕು.

ರಾಮಕೃಷ್ಣ ಹೆಗಡೆ
(ಕರ್ನಾಟಕದ ಮಾಜಿ ಮುಖ್ಯ ಮಂತ್ರಿ)

ಹುನಗುಂದ ತಾಲ್ಲೂಕಿನ ಬೇವಿನಮಟ್ಟಿ ಗ್ರಾಮದಲ್ಲಿ ಇತ್ತೀಚೆಗೆ ನಡೆದ ಬಾಲ್ಯವಿವಾಹ ಸಮಯದಲ್ಲಿ ವಧುವಿನ ತಾಯಿ ಈ ವಿವಾಹದ ವಿರುದ್ಧ ಧ್ವನಿ ಎತ್ತಿರುವುದು ನಿಜಕ್ಕೂ ಪ್ರಶಂಸನೀಯ. ಈ ತಾಯಿಗೆ ನಾನು ಅಭಿನಂದನೆಗಳನ್ನು ಸಲ್ಲಿಸಬಯಸುತ್ತೇನೆ. ಈ ಕ್ರಮ ಎಚ್ಚೆತ್ತ ಮಹಿಳೆಯ ದ್ಯೋತಕ. ಹೀಗೆ ಮಹಿಳೆಯರು ಎಚ್ಚೆತ್ತರೆ ಮಹಿಳಾ ಸಂಘಟನೆಗಳೂ ತಮ್ಮ ಪಾಲಿನ ಕರ್ತವ್ಯ ನಿರ್ವಹಿಸುವಂತಾದರೆ ಬಾಲ್ಯವಿವಾಹ, ದೇವದಾಸಿ ಪದ್ಧತಿ, ವರದಕ್ಷಿಣೆ ಮುಂತಾದ ಸಾಮಾಜಿಕ ಪಿಡುಗುಗಳನ್ನು ಸಮಾಜದಿಂದ ದೂರ ಮಾಡಲು ಸಾಧ್ಯ.

ಸಹಾಯಕ ನಿರ್ದೇಶಕ
ಮಹಿಳೆಯರು ಮತ್ತು ಮಕ್ಕಳ ಕಲ್ಯಾಣ
ಇಲಾಖೆ, ವಿಜಾಪುರ (ಪ್ರಜಾವಾಣಿ
ವಾಚಕರ ವಾಣಿಯಿಂದ)

ಮುಂಬರುವ ಚುನಾವಣೆಯಲ್ಲ ಶೇ.೨೦ರಷ್ಟು ಸ್ಥಾನಗಳಿಗೆ ಸ್ಪರ್ಧಿಸಿ ಲೋಕಸಭೆಯಲ್ಲಿ ಮಹಿಳಾ ಸದಸ್ಯರ ಬಲ ಹೆಚ್ಚಿಸಲು ಅಖಿಲ ಭಾರತ ಮಹಿಳಾ ಕಾಂಗ್ರೆ ಎಲ್ಲ ರೀತಿಯ ಪ್ರಯತ್ನ ಮಾಡುತ್ತಿದೆ.

ಜಯಂತಿ ಪಟ್ನಾಯಕ್
(ಅ. ಭಾ. ಮ. ಕಾಂಗ್ರೆ ಅಧ್ಯಕ್ಷೆ, ಎಂ. ಪಿ.)

ನಂ. ಮ್ಯಾಗ್ (5) ಪಿಆರ್‌ಬಿ ಡಿಕ್ಲೇರ್ಡ್ : 284 | 8889

ಓದುಗರಲ್ಲಿ ಮನವಿ,

ಶತಮಾನಗಳಿಂದ ತುಳಿತಕ್ಕೊಳಗಾದ ಸ್ತ್ರೀಯರ ಧ್ವನಿಯಾದ ಮಾನಸ ಪತ್ರಿಕೆಯನ್ನು ಕ್ರಮವಾಗಿ ಪ್ರಕಟಿಸಬೇಕೆಂಬ ಮಹತ್ವಾಕಾಂಕ್ಷೆಯಿಂದ ಪ್ರಾರಂಭಿಸಿದರೂ, ಆರ್ಥಿಕ ಕಾರಣಗಳಿಂದಾಗಿ ಪತ್ರಿಕೆಯನ್ನು ಕ್ರಮವಾಗಿ ಪ್ರಕಟಿಸಲು ಸಾಧ್ಯವಾಗದೆ ಇರುವುದನ್ನು ನೀವು ಈಗಾಗಲೇ ಗಮನಿಸಿರಬಹುದು.

ನಮ್ಮೆಲ್ಲರ ಪ್ರಾಮಾಣಿಕ ಪ್ರಯತ್ನವನ್ನೂ ಮೀರಿ ಅಡಿಗಡಿಗೆ ಎದುರಾಗುವ ಸಮಸ್ಯೆಯಿಂದಾಗಿ ಪತ್ರಿಕೆ ತುಂಬಾ ವಿಳಂಬ ಗತಿಯಲ್ಲಿ ಪ್ರಕಟವಾಗುತ್ತಿದೆ. ಪತ್ರಿಕೆಯ ವೆಚ್ಚವನ್ನು ಕಡಿಮೆ ಮಾಡುವ ಉದ್ದೇಶದಿಂದ ಒಂದು ಪುಟ್ಟದಾದ ಅಚ್ಚುಮೊಳೆಯ ಕೇಂದ್ರವನ್ನು ಈಗಾಗಲೇ ಪ್ರಾರಂಭಿಸಿದ್ದೇವೆ. ಇದರ ಖರ್ಚು ವೆಚ್ಚಗಳೊಂದಿಗೆ ಬಾಡಿಗೆಗೆ ಹಣ ಹೊಂದಿಸುವುದು ದುಸ್ತರವಾಗುತ್ತಿದೆ. ಈ ಹಂತದಲ್ಲಿ ಪತ್ರಿಕೆಯ ಆತ್ಮೀಯ ಹಿತೈಷಿಗಳಾದ ನಿಮಗೆ ಈ ಕೆಳಗಿನ ಕಳಕಳಿಯ ಮನವಿಯನ್ನು ಮಾಡುತ್ತಿದ್ದೇವೆ. ಪ್ರತಿ ತಿಂಗಳೂ ಮಾನಸ ಆಫೀಸ್ ಬಾಡಿಗೆಗೆಂದು ರೂ. 5-00 ಕಳಿಸಲು ಸಾಧ್ಯವೆ? ಪ್ರತಿ ತಿಂಗಳೂ ಕಳಿಸುವುದು ಸಮಸ್ಯೆಯೆನಿಸಿದರೆ, ಅರ್ಧ ವರ್ಷದ ಅಂದರೆ ರೂ. 30-00 ಅಥವಾ ಒಂದು ವರ್ಷದ ರೂ. 60-00 ಒಟ್ಟಿಗೆ ಕಳಿಸಬಹುದು. ನಮ್ಮ ಈ ಕಿರು ಪ್ರಯತ್ನಕ್ಕೆ ನಿಮ್ಮ ಬೆಂಬಲ ಮತ್ತು ಪ್ರೋತ್ಸಾಹವಿದೆಯೆಂಬ ಭರವಸೆ ನಮಗಿದೆ.

ಸಂ. ಮಂಡಳಿ.

ಸಂಪಾದಕರು, ಪ್ರಕಾಶಕರು ಹಾಗೂ ಮುದ್ರಕರು ಎಚ್. ಎಸ್. ರಾಜೇಶ್ವರಿ, ಮಾನವಿ ಮುದ್ರಣಾಲಯ,
2 | ಬಿ ಮಹಾದೇಶ್ವರ ನಿಲಯ, 2ನೇ ಮೇನ್, 2ನೇ ಕ್ರಾಸ್, ಹೊಸಳ್ಳಿ, ವಿಜಯನಗರ, ಬೆಂಗಳೂರು-40.

# ಕರ್ನಾಟಕ ರೇಷ್ಮೆ ಮಾರಾಟ ಮಂಡಳಿ ನಿಯಮಿತ

ಕರ್ನಾಟಕ ರೇಷ್ಮೆ ಮಾರಾಟ ಮಂಡಳಿಯು ಮುಖ್ಯವಾಗಿ ಕಚ್ಚಾ ರೇಷ್ಮೆ ಮತ್ತು ಹುರಿ ರೇಷ್ಮೆಯನ್ನು ಖರೀದಿಸಿ ಹಾಗೂ ಮಾರಾಟ ಮಾಡುತ್ತಿದೆ. ಈ ಸಂಸ್ಥೆಯ ಮುಖ್ಯ ಉದ್ದೇಶಗಳು ಈ ಕೆಳಕಂಡಂತೆ ಇವೆ: –

೧) ನೂಲು ಬಿಚ್ಚುವವರ ಕ್ಷೇಮಾಭಿವೃದ್ಧಿಗಾಗಿ ಅವರು ಉತ್ಪಾದಿಸುವ ರೇಷ್ಮೆಗೆ ಉತ್ತಮ ಬೆಲೆಯನ್ನು ಕೊಡಲು ಮಂಡಳಿಯು, ರೇಷ್ಮೆಗೆ ಬೇಡಿಕೆ ಕಡಿಮೆಯಾದ ಸಮಯದಲ್ಲಿ ಹೆಚ್ಚು ಪಾಲು ರೇಷ್ಮೆಯನ್ನು ಖರೀದಿಸಿ, ಬೆಲೆಯು ಕಡಿಮೆಯಾಗದಂತೆ ನೋಡಿಕೊಳ್ಳುವುದು.

೨) ಕಚ್ಚಾ ರೇಷ್ಮೆಯ ಏರಿಳಿತವನ್ನು ನಿಯಂತ್ರಿಸುವುದು.

೩) ನೇಕಾರರ ಕ್ಷೇಮಾಭಿವೃದ್ಧಿ ಸಂಸ್ಥೆಗಳನ್ನು ಬಲಪಡಿಸುವುದು.

೪) ಸಣ್ಣ ನೇಕಾರರಿಗೆ ಕಚ್ಚಾ ಹುರಿ ರೇಷ್ಮೆಯನ್ನು ಸುಲಭವಾಗಿ ದೊರಕುವಂತೆ ವ್ಯವಸ್ಥೆ ಮಾಡುವುದು.

೫) ಗುಣಮಟ್ಟವನ್ನು ಕಾಪಾಡುವ ನಿಯಂತ್ರಣಗಳನ್ನು ಬಿಗಿಯಾಗಿ ಪಾಲಿಸಿ, ರೇಷ್ಮೆಯ ಗುಣಮಟ್ಟವನ್ನು ಕಾಪಾಡುವುದು.

ಮೇಲ್ಕಂಡ ಉದ್ದೇಶಗಳನ್ನು ಸಾಧಿಸಿ. ಕರ್ನಾಟಕ ರೇಷ್ಮೆ ಮಾರಾಟ ಮಂಡಳಿಯು ನೂಲು ಬಿಚ್ಚುವವರ, ನೇಕಾರರ ಮತ್ತು ರೇಷ್ಮೆ ಹುರಿ ಮಾಡುವವವರ ಹಿತಾಸಕ್ತಿಯನ್ನು ರಕ್ಷಿಸುತ್ತಿದೆ.

ನಿಮ್ಮ ಬೇಡಿಕೆಗಳಿಗಾಗಿ ಈ ಕೆಳಕಂಡ ವಿಳಾಸಕ್ಕೆ ಸಂಪರ್ಕಿಸಿ; –

ಕರ್ನಾಟಕ ರೇಷ್ಮೆ ಮಾರಾಟ ಮಂಡಳಿ ನಿಯಮಿತ.
ಮೈಶುಗರ್ ಕಟ್ಟಡ ಜೆ. ಸಿ. ರಸ್ತೆ.
ಬೆಂಗಳೂರು — ೫೬೦ ೦೦೨.

ದೂರವಾಣಿ ಸಂಖ್ಯೆ : ೨೨೨೨೧೨
೨೩೫೧೬೯
೨೩೮೧೦೭

ಗ್ರಾಮ್ಸ್ : ಕರೇಷ್ಮೆ
ಟೆಲೆಕ್ಸ್ ಸಂಖ್ಯೆ : ೦೮೪೫—೮೩೫೪

ನಮ್ಮ ಶಾಖೆಗಳು :

ಬೆಂಗಳೂರು, ದೊಡ್ಡಬಳ್ಳಾಪುರ, ಕೊಳ್ಳೆಗಾಲ, ಕಾಂಚಿಪುರಂ, ಕುಂಭಕೋಣಂ, ಆರಣಿ, ಸೇಲಂ, ಧರ್ಮಾವರಂ, ರಾಯದುರ್ಗ, ಪೋಚಂಪಲ್ಲಿ, ವಾರಣಾಸಿಗಳಲ್ಲಿವೆ.